# ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ



ಕನ್ನಡ ವಿಶ್ವವಿದ್ಯಾನಿಲಯ

ಹಂಪಿ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ


ಸಂಶೋಧಕಿ

ಕು. ಫ್ಲೋರಿನ್ ಶೆಲೋಮಿತ್ ಸೋನ್ಸ್





ಮಾರ್ಗದರ್ಶಕರು

ಡಾ.ವಾಲ್ಟರ್ ಡಿ'ಸೋಜಾ

ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು

ಬಲ್ಮಠ, ಮಂಗಳೂರು


2013

# ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ



ಕನ್ನಡ ವಿಶ್ವವಿದ್ಯಾನಿಲಯ

ಹಂಪಿ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕಿ

ಕು. ಫ್ಲೋರಿನ್ ಶೆಲೋಮಿತ್ ಸೋನ್ಸ್



ಮಾರ್ಗದರ್ಶಕರು

ಡಾ.ವಾಲ್ಟರ್ ಡಿ'ಸೋಜಾ

ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು

ಬಲ್ಮಠ, ಮಂಗಳೂರು

2013




ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಪ್ರಮಾಣ ಪತ್ರ

*ಕನ್ನಡ ವಿಶ್ವವಿದ್ಯಾಲಯ,ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ, "ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಈ ನಿಬಂಧವು ಈ ಸಂಶೋಧಕಿಯ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರು ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ.ವಾಲ್ಟರ್ ಡಿ'ಸೋಜಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.*

ಕು. ಫ್ಲೋರಿನ್ ಶಲೋಮಿತ್ ಸೋನ್ಸ್
ಕರ್ನಾಟಕ ಥಿಯೋಲಾಜಿಕಲ್
ಸಂಶೋಧನಾ ಕೇಂದ್ರ,
ಬಲ್ಮಠ, ಮಂಗಳೂರು.

# ಯೋಗ್ಯತಾ ಪತ್ರ

ಕು.ಫ್ಲೋರಿನ್ ಶೆಲೋಮಿತ್ ಸೋನ್ಸ್, ನವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ "ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ನಿಬಂಧವು ಸಂಶೋಧಕಿಯ ಸ್ವಂತ ಪರಿಶ್ರಮ, ಅಭಿಪ್ರಾಯ, ಸಂಗ್ರಹ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಪ್ರಬಂಧದ ವಿಷಯವನ್ನು ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಡಾ.ವಾಲ್ಟರ್ ಡಿ'ಸೋಜಾ
ಸಂಶೋಧನಾ ಮಾರ್ಗದರ್ಶಕರು
ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಪರಿವಿಡಿ

# ಕೋಷ್ಟಕಗಳ ವಿವರ

ಅಧ್ಯಾಯ –1

# ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

- ಪೀಠಿಕೆ
- ಸಾಹಿತ್ಯಾವಲೋಕನ
- ಸಂಶೋಧನೆಯ ಸಮಸ್ಯೀಕರಣ
- ಸಂಶೋಧನಾ ಪ್ರಶ್ನೆಗಳು
- ಸಂಶೋಧನೆಯ ಉದ್ದೇಶಗಳು
- ಸಂಶೋಧನೆಯ ಊಹೆಗಳು
- ಸಂಶೋಧನೆಯ ವಿಧಾನಗಳು
- ಅಧ್ಯಯನದ ಮಿತಿಗಳು
- ಪತ್ಯ ನಿರೂಪಣೆ

**ಪೀಠಿಕೆ**

ಯಾವುದೇ ದೇಶದ ಆರ್ಥಿಕ ಅಭಿವೃದ್ಧಿ, ಅಲ್ಲಿರುವ ಸಂಪನ್ಮೂಲಗಳ ಸ್ವರೂಪ ಮತ್ತು ಪ್ರಮಾಣ, ಸಂಪನ್ಮೂಲಗಳ ನಿರ್ವಹಣೆ ಮತ್ತು ಬಳಕೆ೦ಯನ್ನು ಅವಲಂಬಿಸಿರುತ್ತದೆ. ಸಂಪನ್ಮೂಲಗಳ ನಿರ್ವಹಣೆ ಮತ್ತು ಬಳಕೆಯಲ್ಲಿ ಸಂಸ್ಥೆಗಳ ಪಾತ್ರ ಮಹತ್ತ್ವವಾದದ್ದು. ಇತ್ತೀಚಿನ ದಿನದಲ್ಲಿ ಅಭಿವೃದ್ಧಿಯಲ್ಲಿ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳ ಪಾತ್ರ ಹೆಚ್ಚುತ್ತಿದೆ ಹಾಗೂ ಬದಲಾಗಿರುತ್ತದೆ. ಅಭಿವೃದ್ಧಿಯ ಸಂದರ್ಭದಲ್ಲಿ 'ಸಂಸ್ಥೆ' ಎಂದರೆ ಕೇವಲ ಸಂಘಟನೆಗಳಲ್ಲಿ (ಸರಕಾರ ಅಥವಾ ಸರಕಾರೇತರ). 'ಸಂಸ್ಥೆ' ಎಂಬುವುದು ವ್ಯಾಪಕವಾದ ಅರ್ಥವನ್ನು ಹೊಂದಿದೆ. ಅರ್ಥಶಾಸ್ತ್ರಕ್ಕೆ ಸಂಬಂಧಿಸಿದಂತೆ, "ಸಂಸ್ಥೆ"ಯನ್ನು ನಾರ್ತ್ ಡೊಗಲಾಸ್ ಎಂಬವರು ಬಹಳ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಅವರ ಪ್ರಕಾರ ಸಂಸ್ಥೆ ಎಂಬುದು ಮನಷ್ಯರೇ ರೂಪಿಸಿಕೊಂಡಿರುವ ನೀತಿ ಸಂಹಿತೆ ("Code of Conduct") ಆರ್ಥಿಕ ವ್ಯವಹಾರದ ವಿನಿಮಯಕ್ಕೆ ಬೇಕಾದ ನೀತಿ ನಿಯಮಗಳು. ಅವರ ಪ್ರಕಾರ ಮುಖ್ಯವಾಗಿ ಮೂರು ಸಂಸ್ಥೆಗಳನ್ನು ಗುರುತಿಸಬಹುದು ಅವುಗಳೆಂದರೆ ಶಾಸನಗಳು, ವ್ಯವಸ್ಥಿತವಾದ ಸಂಘ ಸಂಸ್ಥೆಗಳು ಮತ್ತು ಸಮಾಜದಲ್ಲಿ ಉದ್ಭವಿಸಿರುವ ಸಂಪ್ರದಾಯಗಳು.

ಅನೇಕ ಚಟುವಟಿಕೆಗಳು ಕ್ರಮದ ಮಿತಿಮೀರಿದಾಗ ಅವುಗಳ ನಿಯಂತ್ರಣಕ್ಕೆ ಆಗಾಗ ಶಾಸನಗಳನ್ನು ರೂಪಿಸುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಪರಿಸರ ಸಂರಕ್ಷಣೆಗಾಗಿ ರೂಪಿಸಿರುವ ಅನೇಕ ಖಾಯಿದೆಗಳು ಇದಕ್ಕೆ ಉದಾಹರಣೆಗಳು-ವನ್ಯ ಸಂರಕ್ಷಣಾ ಖಾಯಿದೆ, ವನ್ಯ ಜೀವಿಗಳ ಸಂರಕ್ಷಣಾ ಖಾಯಿದೆ, ಪರಿಸರ ಮಾಲಿನ್ಯ ನಿಯಂತ್ರಣ ಖಾಯಿದೆಗಳು... ಹೀಗೆ ಅನೇಕ ಶಾಸನಗಳನ್ನು ನಿರೂಪಿಸಿರುವುದನ್ನು ನಾವು ಗಮನಿಸಬಹುದು.

ವ್ಯವಸ್ಥಿತ ಸಂಘ ಸಂಸ್ಥೆಗಳಲ್ಲಿ ಮುಖ್ಯವಾಗಿ ಶಾಲಾ ಕಾಲೇಜುಗಳು, ಆಸ್ಪತ್ರೆಗಳು, ಬ್ಯಾಂಕ್ ವಿಮಾ ಸಂಸ್ಥೆಗಳ ವ್ಯಾಪಾರ ಸಂಸ್ಥೆಗಳು... ಹೀಗೆ ಅನೇಕ ಸಂಸ್ಥೆಗಳನ್ನು ನಾವು ಕಾಣಬಹುದು. ಇವುಗಳು ನಿಯಮ ಬದ್ಧವಾಗಿ ನಿರ್ದಿಷ್ಟ ಕಾರ್ಯಗಳನ್ನು ನಡೆಸುತ್ತದೆ.

ಇದಲ್ಲದೆ, ಅನೇಕ ನೀತಿ ಸಂಹಿತೆಗಳು ಸಾಮಾಜಿಕ ಜೀವನದ ಅನುಭವದ ಮೇಲೆ ನಾವು ಅಭ್ಯಾಸ ಮಾಡುತ್ತೇವೆ. ಸಾಮಾಜಿಕ ಸಂಪ್ರದಾಯಗಳು ಉದಾ: ಹಿರಿಯರಿಗೆ ಗೌರವಿಸಬೇಕು. ಇದು ಎಲ್ಲಿಯೂ ಶಾಸನವಾಗಿಲ್ಲ. ಆದರೆ ಸಾಮಾಜಿಕವಾಗಿ ಹುಟ್ಟಿಕೊಂಡ ಒಂದು ನೀತಿ ಸಂಹಿತೆ. ಹೀಗೆ ಮೂರು ವಿಧದಲ್ಲಿ ಸಂಸ್ಥೆಗಳು ಮಾನವನ ವ್ಯವಸ್ಥಿತ ಮತ್ತು ನಿಯಮಬದ್ಧ ವ್ಯವಹಾರಗಳಿಗಾಗಿ ಹುಟ್ಟಿಕೊಳ್ಳುತ್ತವೆ.

ಆರ್ಥಿಕ ಅಭಿವೃದ್ಧಿ ವಿಚಾರದಲ್ಲಿ ಈ ಕುರಿತು ಬಹಳ ಚರ್ಚೆಗಳು ಆಗಿದೆ. ಸಾಂಪ್ರದಾಯಿಕ ಪಂಥದ [1] (classical theory) ಪ್ರಕಾರ ಆರ್ಥಿಕಾಭಿವೃದ್ಧಿಗೆ ಸರಕಾರದ ಪಾಲ್ಗೊಳ್ಳುವಿಕ ಅಗತ್ಯವಿಲ್ಲ. ಕೇವಲ ಮಾರುಕಟ್ಟೆಯ ಶಕ್ತಿಗಳು ಆರ್ಥಿಕ ಸಮತೋಲನವನ್ನು ಕಾಯ್ದುಕೊಳ್ಳುತ್ತದೆ. ಆದರೆ, ಬಳಿಕ ಆಧುನಿಕ ಅರ್ಥಶಾಸ್ತ್ರದಲ್ಲಿ [2] (J.M.keynes) ಸರಕಾರ ಪಾಲ್ಗೊಳ್ಳುವ ಅಗತ್ಯ ಮತ್ತು ಅಭಿವೃದ್ಧಿಯಲ್ಲಿ ಸರಕಾರದ ಪಾತ್ರವನ್ನು ಚೆನ್ನಾಗಿ ನಿರೂಪಿಸಲಾಯಿತು. ಕೈಗಾರಿಕಾ ಕ್ರಾಂತಿಯ ಬಳಿಕ ವಿಶ್ವ ಆರ್ಥಿಕ

ಅಭಿವೃದ್ಧಿಯಲ್ಲಿ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ನಾನಾ ರೀತಿಯಲ್ಲಿ ಪಾಲ್ಗೊಳ್ಳುವುದನ್ನು ನಾವು ಗಮನಿಸಬಹುದು.

ಹೀಗೆ ಮಾನವನು ಕ್ರಮಬದ್ಧವಾಗಿ ಆರ್ಥಿಕ ವ್ಯವಹಾರವನ್ನು ಮಾಡಲು ಅನೇಕ ಸಂಸ್ಥೆಗಳನ್ನು ರೂಪಿಸಿಕೊಳ್ಳುವುದನ್ನು ನಾವು ಕಾಣಬಹುದು. ಅಭಿವೃದ್ಧಿಯಲ್ಲಿ, ಸರಕಾರ ಮತ್ತು ಸರಕಾರೇತರ ಸಂಸ್ಥೆಗಳ ಪಾತ್ರಗಳ ಬಗ್ಗೆ ಅನೇಕ ಅಧ್ಯಯನಗಳು ನಡೆದಿದೆ. ಈ ರೀತಿ ಇತಿಹಾಸದ ವಿವಿಧ ಹಂತಗಳಲ್ಲಿ ಅನೇಕ ಸಂಸ್ಥೆಗಳು ಹುಟ್ಟಿಕೊಂಡು ಬೆಳೆದ ರೀತಿಯನ್ನು ನಾವು ಕಾಣಬಹುದು. ಅದರಂತೆ, ವಿಕೇಂದ್ರಿಕೃತ ಸಿದ್ಧಾಂತದಡಿ ಸ್ಥಳೀಯ ಸಂಸ್ಥೆಗಳು ಹುಟ್ಟಿಕೊಂಡವು.

## ವಿಕೇಂದ್ರಿಕೃತ ಅಭಿವೃದ್ಧಿ

ಅಭಿವೃದ್ಧಿಯು ಕೇಂದ್ರಿಕೃತವಾಗಿರದೇ ವಿಕೇಂದ್ರಿಕೃತವಾಗಿರಬೇಕು ಎನ್ನುವುದು ಆರ್ಥಿಕ ತಜ್ಞರ ಅನಿಸಿಕೆ. ಸ್ಥಳೀಯವಾದ ಸಂಪನ್ಮೂಲಗಳನ್ನು ಬಳಸಿಕೊಂಡು ಅಭಿವೃದ್ಧಿ ನಿರ್ವಹಣೆ ಮಾಡುವುದು ಹೆಚ್ಚು ಸೂಕ್ತ ಎನ್ನುವುದು ಹಲವರ ಅಭಿಪ್ರಾಯ ಇದರಂತೆ ವಿಕೇಂದ್ರಿಕೃತ ಅಭಿವೃದ್ಧಿ ತಂತ್ರಗಾರಿಕೆಯೂ ಹೆಚ್ಚು ಜನಪ್ರಿಯವಾಯಿತು. ಇದರಿಂದಾಗಿ ಸ್ಥಳೀಯ ಸಂಸ್ಥೆಗಳು ಹೆಚ್ಚು ಮಹತ್ತ್ವವನ್ನು ಪಡೆದುಕೊಂಡವು. ವಿಕೇಂದ್ರಿಕೃತ ಅಭಿವೃದ್ಧಿ ತಂತ್ರಗಾರಿಕೆ ಇತ್ತೀಚಿನ ದಿನಗಳಲ್ಲಿ ಅಭಿವೃದ್ಧಿಯ ರೀತಿ ನೀತಿಗಳ ಚಿಂತನೆಯಲ್ಲಿ ಹೆಚ್ಚು ಮಹತ್ತ್ವವನ್ನು ಪಡೆಯುತ್ತದೆ.

ಭಾರತದಂತಹ ವೈವಿಧ್ಯತೆಯಿಂದ ಕೂಡಿರುವ ರಾಷ್ಟ್ರಗಳ ಅಭಿವೃದ್ಧಿಗೆ ಇದು ಹೆಚ್ಚು ಸೂಕ್ತ ಎಂದು ಪರಿಗಣಿಸಲಾಗಿದೆ. ಸ್ಥಳೀಯ ಅಭಿವೃದ್ಧಿಗಳು ಸ್ಥಳೀಯರಿಂದಲೇ ಸ್ಥಳೀಯವಾಗಿ ಲಭ್ಯವಿರುವ ಸಂಪನ್ಮೂಲಗಳ ಬಳಕೆಯಿಂದಲೇ ನಿರ್ವಹಿಸಲು ವಿಕೇಂದ್ರಿಕೃತ ವ್ಯವಸ್ಥೆ ಹೆಚ್ಚು ಪರಿಣಾಮಕಾರಿಯಾಗಿದೆ. ವೈವಿಧ್ಯತೆಯಿಂದ ಕೂಡಿರುವ ಭಾರತದ ಹಳ್ಳಿಗಳ ಅಭಿವೃದ್ಧಿಗೆ ಜನರ ಸಹಭಾಗಿತ್ವ, ಸ್ಥಳೀಯ ಬೇಡಿಕೆಗಳು ವಿಭಿನ್ನವಾಗಿರುವಂತಹ ಬೇರೆ ಬೇರೆ ಅಭಿವೃದ್ಧಿ ಯೋಜನೆಗಳು, ಕಾರ್ಯಕ್ರಮದ ಅನುಷ್ಠಾನದ ರೀತಿಗಳಲ್ಲಿ ವೈವಿಧ್ಯತೆ ಹೊಂದಿರುತ್ತದೆ. ಹೀಗೆ ಸ್ಥಳೀಯ ಅಭಿವೃದ್ಧಿಯ ಆಡಳಿತದಲ್ಲಿ ಗಮನಿಸಬೇಕಾದ ವಿಷಯಗಳು ಅನೇಕವಿದೆ. ಆದ್ದರಿಂದಲೇ, ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ ಮಹತ್ತ್ವವನ್ನು ಗಳಿಸಿದೆ. ಈ ರೀತಿಯ ವಿಶ್ಲೇಷಣೆಯು ಹಿಂದಿನ ಕಾಲದ ಚರಿತ್ರೆಯಿಂದಲೂ ಕಾಣಸಿಗುತ್ತದೆ. ಅಭಿವೃದ್ಧಿ ಹೊಂದುತ್ತಿರುವ ಭಾರತದಂತಹ ದೇಶದಲ್ಲಿ ಪಂಚವಾರ್ಷಿಕ ಯೋಜನೆಯ ಮುಖಾಂತರ ವಿಕೇಂದ್ರೀಕರಣದ ತತ್ತ್ವವನ್ನು ಉಪಯೋಗಿಸಿ ಜನರ ಸಹಭಾಗಿತ್ವವನ್ನು ತರಲು ಸ್ಥಳೀಯ ಸಂಸ್ಥೆಗಳು ಉದ್ಭವಗೊಂಡಿವೆ.

ಭಾರತದ ಇತಿಹಾಸದಲ್ಲಿ ಸ್ಥಳೀಯ ಆಡಳಿತದ ಕುರಿತು ಬಹಳಷ್ಟು ಚರ್ಚೆಗಳನ್ನು ನಾವು ನೋಡಬಹುದು. ಪಂಚವಾರ್ಷಿಕ ಯೋಜನೆಗಳಲ್ಲಿ ಈ ಸಂಸ್ಥೆಗಳನ್ನು ಬಲಪಡಿಸಲು ಅನೇಕ ಪ್ರಯತ್ನಗಳು ನಡೆದಿವೆ. ಭಾರತದ ಸಂವಿಧಾನಕ್ಕೆ 73ನೇ ತಿದ್ದುಪಡಿ ತಂದ ನಂತರ ಸ್ಥಳೀಯ ಸಂಸ್ಥೆಗಳ ಹಣಕಾಸು ಹಾಗೂ ಅದರ ನಿರ್ವಹಣೆಗೆ ಹೆಚ್ಚು ಪ್ರಾಮುಖ್ಯತೆ ಸಿಕ್ಕಿರುತ್ತದೆ. ಅಂದರೆ ಸ್ಥಳೀಯ ಸಂಸ್ಥೆಗಳ ಹೆಚ್ಚು ಹೆಚ್ಚು ಹಣಕಾಸು ಪಡೆದು ಅಭಿವೃದ್ಧಿ ಕಾರ್ಯದಲ್ಲಿ ಜವಾಬ್ದಾರಿ ವಹಿಸುವುದು ಹೆಚ್ಚಿತ್ತು.

ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರದ ಕುರಿತು ಸಂಶೋಧನೆಗಳನ್ನು ನಡೆಸುವುದರಿಂದ, ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರವನ್ನು ಬಲಪಡಿಸಲು ನಮಗೆ ಅನೇಕ ಸಂಗತಿಗಳ ಸೂಕ್ಷ್ಮ ತಿಳಿಯುತ್ತದೆ. ಈ ಪಥದಲ್ಲಿ ಸಂಶೋಧನೆಗೆ ವಿವಿಧ ಅಂಶಗಳನ್ನು ಗುರುತಿಸಬಹುದು. ಅವುಗಳೆಂದರೆ,

- ❖ ಸ್ಥಳೀಯ ಸಂಸ್ಥೆಗಳ ಇತಿಹಾಸ
- ❖ ಸ್ಥಳೀಯ ಸಂಸ್ಥೆಗಳ ಕಾರ್ಯ ನಿರ್ವಹಣಾ ವಿಧಾನ
- ❖ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ.

ಇತ್ತೀಚಿನ ದಿನಗಳಲ್ಲಿ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯಲ್ಲಿ ನೇರವಾಗಿ ತೊಡಗಿಗೊಂಡಿವೆ ಮತ್ತು ಇದರಿಂದಾಗಿ ಸಾರ್ವಜನಿಕ ಹಣಕಾಸು ನಿರ್ವಹಣೆಯ ಜವಾಬ್ದಾರಿ ಅವುಗಳದ್ದಾಗಿದೆ. ಆದ್ದರಿಂದ, ಈ ಪ್ರಸ್ತಾಪಿಸಿದ ಸಂಶೋಧನೆಯಲ್ಲಿ "ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ" ವಿಷಯದ ಕೂಲಂಕಷವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ಸಾಹಿತ್ಯಾವಲೋಕನ

ಅಭಿವೃದ್ಧಿಯಲ್ಲಿ ಜನರು ಪಾಲ್ಗೊಳ್ಳುವುದು ಬಹಳ ಮುಖ್ಯವೆಂದು ಬಹಳ ಹಿಂದೆಯೇ ಕಂಡುಕೊಳ್ಳಲಾಗಿದೆ. ಆದರೆ, ಸ್ಥಳೀಯ ಮಟ್ಟದಲ್ಲಿ, ಅದರಲ್ಲೂ ಅವಿದ್ಯಾವಂತರು, ಸಾಮಾಜಿಕ ಜೀವನದ ಅರಿವನ್ನು ಒಂದು ಮಿತಿಯಲ್ಲಿ ಅರಿತುಕೊಂಡಿರುವವರು, ಬಡತನ, ನಿರುದ್ಯೋಗದಂತಹ ಸಮಸ್ಯೆಗಳಲ್ಲಿ ನೊಂದಿರುವವರು ಇರುವಾಗ ಅವರಿಂದ ನಾವು ಹೇಗೆ ಮತ್ತು ಯಾವ ಮಟ್ಟದಲ್ಲಿ ಸಹಭಾಗಿತ್ವವನ್ನು ನಿರೀಕ್ಷಿಸಬಹುದು?. ಈ ಪ್ರಶ್ನೆ ಹಿಂದುಳಿದ ರಾಷ್ಟ್ರಗಳಲ್ಲಿ ಮತ್ತು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಸಹಜವಾಗಿ ಮೂಡಿಬರುತ್ತದೆ. ಆದ್ದರಿಂದ, ಅಂತಹ ಸಂದರ್ಭಗಳಲ್ಲಿ ಜನರನ್ನು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವಂತೆ ಮಾಡುವ ಸಂಸ್ಥೆಗಳನ್ನು ಕಟ್ಟುವುದು ಅಗತ್ಯವಾಗುತ್ತದೆ.

ಭಾರತದಂತಹ ವೈವಿಧ್ಯಮಯ ರಾಷ್ಟ್ರಗಳಲ್ಲಿ ವಿಕೇಂದ್ರೀಕೃತ ಅಭಿವೃದ್ಧಿ ತಂತ್ರಗಾರಿಕೆಯನ್ನು ಒಪ್ಪಿಕೊಂಡಮೇಲೆ ಸ್ಥಳೀಯ ಜನರು, ಸ್ಥಳೀಯ ಅಭಿವೃದ್ಧಿಗೆ ಸಂಘಟಿತರಾಗಿ, ಪ್ರಜಾಪ್ರಭುತ್ವದ ನಿಯಮದಂತೆ ಪಾಲ್ಗೊಳ್ಳಲು ಸ್ಥಳೀಯ ಸಂಸ್ಥೆಗಳು ಸಹಕಾರಿಯಾಗಬಹುದು. ಆದರೆ, ಈ ನಿಟ್ಟಿನಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ, ವಿವಿಧ ಕಾಲಗಳಲ್ಲಿ ಅನುಭವಗಳು ಬೇರೆ ಬೇರೆಯಾಗಿವೆ. ವಿಕೇಂದ್ರಿಕರಣ, ಜನರ ಪಾಲ್ಗೊಳ್ಳುವಿಕೆ ಹಾಗೂ ಸ್ಥಳೀಯ ಸಂಸ್ಥೆಗಳ ಕುರಿತಾಗಿ ಅನೇಕರು ನಡೆಸಿರುವ ಅಧ್ಯಯನದಿಂದ ನಮಗೆ ಇದು ತಿಳಿದುಬರುತ್ತದೆ. ವಿಕೇಂದ್ರಿಕರಣಕ್ಕೆ ಸಂಬಂಧಿಸಿದ ಅಧ್ಯಯನಗಳು ನಡೆದಿರುತ್ತವೆಯಾದರೂ ಹೆಚ್ಚಿನ ಅಧ್ಯಯನಗಳು ಸಮಾಜಶಾಸ್ತ್ರ, ರಾಜಕೀಯಶಾಸ್ತ್ರ, ನಿರ್ವಹಣಾ ಶಾಸ್ತ್ರದ ಆಯಾಮಗಳಿಗೆ ಸಂಬಂಧಿಸಿದ ಅಧ್ಯಯನವಾಗಿರುತ್ತದೆ.

ಸಮಾಜಶಾಸ್ತ್ರದಲ್ಲಿ ಸ್ಥಳೀಯ ಸಂಸ್ಥೆ ಮತ್ತು ವಿಕೇಂದ್ರಿಕೃತಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಯನ ನಡೆದಿರುತ್ತದೆ (ವಿಜೇಸ್ಲೋವ್ ಬಾರ್‌ಟೀಕ್ 2009) ಈ ಎಲ್ಲಾ ಅಧ್ಯಯನವು ಸಾಮಾಜಿಕ ದೃಷ್ಟಿಯಿಂದ ನಾಗರಿಕ ಸಮಾಜದ ಎಲ್ಲ ರೀತಿಯ ತೊಂದರೆಗಳನ್ನು ಸ್ಥಳೀಯ ಆಡಳಿತದಿಂದ

ಮಾತ್ರವಲ್ಲದೆ ಅಧಿಕಾರದ ವಿಂಗಡಣೆಯಿಂದ ಸಮಾಜವು ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತದೆ ಎಂದು ವಿಶ್ಲೇಷಣೆ ನೀಡಿರುತ್ತಾರೆ.

ರಾಜ್ಯಶಾಸ್ತ್ರದಲ್ಲಿ ಸ್ಥಳೀಯ ಸಂಸ್ಥೆ ಮತ್ತು ವಿಕೇಂದ್ರಿಕೃತಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಯನ ನಡೆದಿರುತ್ತದೆ (ಇಂದಿರಾ.ಎ., ಕೇನಟ್ ಇಟನ್, ಕೈ ಕೈಸಾರ್, ಪಾಲ್ ಸ್ಮೋಕ್, 2001) ಮಾತ್ರವಲ್ಲದೆ ವಿತ್ತನೀತಿ ಮತ್ತು ಅಧ್ಯಯನ ಸಂಸ್ಥೆ ಬೆಂಗಳೂರಿನಲ್ಲಿಯೂ ಅಧ್ಯಯನ ನಡೆದಿರುತ್ತದೆ. ಇಲ್ಲಿ ಆಯವ್ಯಯವನ್ನು ಗಣನೆಗೆ ತೆಗೆದುಕೊಂಡು ಸ್ಥಳೀಯ ಆಡಳಿತಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ದೊರಕಿಸಿ ರಾಜಕೀಯ ತತ್ತ್ವ ಮತ್ತು ಸರಕಾರ ಬೇರೆ ಬೇರೆ ಕ್ಷೇತ್ರದಲ್ಲಿ ತನ್ನದೇ ಆದ ಯೋಜನೆಗಳನ್ನು ಜಾರಿಗೊಳಿಸಬಹುದೆಂದು ಪ್ರತಿಪಾದಿಸಿದ್ದಾರೆ. ಈ ರೀತಿಯಲ್ಲಿ ಆಯವ್ಯಯವನ್ನು ಗಣನೆಗೆ ತೆಗೆದುಕೊಂಡು ಮುಂದೆ ಸರಕಾರಕ್ಕೆ ಬೇಕಾಗಿರುವ ದತ್ತಾಂಶವನ್ನು ಸಂಗ್ರಹಿಸಿ ಸ್ಥಳೀಯ ಆಡಳಿತವನ್ನು ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿ ಪಥದತ್ತ ಮುಂದೆ ನಡೆಸಬಹುದೆಂದು ವಿಶ್ಲೇಷಿಸಿದ್ದಾರೆ.

ಈ ರೀತಿಯಲ್ಲಿ ಅಂತರಾಷ್ಟ್ರೀಯ ಬೆಳವಣಿಗೆಯೂ ಕೂಡ ವಿಕೇಂದ್ರಿಕೃತ ಆಡಳಿತಕ್ಕೆ ಪ್ರಾಮುಖ್ಯತೆಯನ್ನು ನೀಡಿ ಬಡತನ ನಿರ್ವಹಣೆಯಿಂದ, ಅಭಿವೃದ್ಧಿ ಪಥದೆಡೆಗೆ ಸಾಗಬಹುದು ಎಂದು ವಿಶ್ಲೇಷಿಸಿದ್ದಾರೆ.

ನಿರ್ವಹಣಾ ಶಾಸ್ತ್ರದಲ್ಲಿ ಸ್ಥಳೀಯ ಸಂಸ್ಥೆ ಮತ್ತು ವಿಕೇಂದ್ರಿಕೃತಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಯನ ನಡೆದಿರುತ್ತದೆ (ಪವಾನೀತಾ ಸಿಂಗ್, ಡಯಾನ ಬೋಸರ್, ಥೋಮಸ್ ಬೋಸ್‌ರೆಟ್, 2005 ). ಸರಕಾರ, ಅಂತರಾಷ್ಟ್ರೀಯ ದೇಣಿಗೆ, ನಾಗರಿಕ ಸಮಾಜ ಸಂಘದಿಂದ ಸ್ಥಳೀಯ ಆಡಳಿತಕ್ಕೆ ಅಥವಾ ಪ್ರಶಾಸನಕ್ಕೆ ಹೆಚ್ಚು ಒತ್ತುಕೊಟ್ಟು ಸಾಮರ್ಥ್ಯದ ಬೆಳವಣಿಗೆಯ ಬಗ್ಗೆ ಚರ್ಚಿಸಿದ್ದಾರೆ ಮಾತ್ರವಲ್ಲದೆ ಫಲೋತ್ಪಾದಕ ಸಾಮರ್ಥ್ಯದ ಬೆಳವಣಿಗೆಯನ್ನು ಸಾಮುದಾಯಿಕ ಜ್ಞಾನವು ಸಾಮರ್ಥ್ಯದ ಬೆಳವಣಿಗೆ ತಡೆಗೋಡೆಯಾಗಿ ಸ್ಥಳೀಯ ಆಡಳಿತ ಎರಡು ದಶಕದಿಂದ ನಡೆದಿರುವುದನ್ನು ತಿಳಿಯಬಹುದಾಗಿದೆ.

ಆರೋಗ್ಯ ಕ್ಷೇತ್ರದಲ್ಲಿ ವಿಕೇಂದ್ರಿಕರಣವನ್ನು ಗಣನೆಗೆ ತೆಗೆದು ಸಂಖ್ಯಾಶಾಸ್ತ್ರದ ಯಂತ್ರೋಪಕರಣವನ್ನು ಉಪಯೋಗಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಇವರಲ್ಲಿ ಪರಿಣಾಮ ಸಂಬಂಧಿ ಮತ್ತು ಗುಣಾತ್ಮಕ ರೀತಿಯಲ್ಲಿ ಅಧ್ಯಯನ ನಡೆದಿರುತ್ತದೆ. ಇಲ್ಲಿ ನಾವು ಆರ್ಥಿಕ ಸಂಪನ್ಮೂಲ, ಉಪಯುಕ್ತತೆ ಮತ್ತು ಆರೋಗ್ಯ ದರ್ಜೆಯನ್ನು ಮಾಪನ ಮಾಡಿ ಹಣಕಾಸಿನ ಪಕ್ಷಪಾತ, ಯಾವ ರೀತಿಯಲ್ಲಿ ಕೇಂದ್ರದಿಂದ ಬೇರೆ ಬೇರೆ ಸ್ಥಳೀಯ ಆಡಳಿತ ಪ್ರದೇಶಕ್ಕೆ ನಿಯೋಜನೆಗೊಳ್ಳುತ್ತದೆ ಎಂಬುದನ್ನು ವಿವರಿಸಿದ್ದಾರೆ. ಮಾತ್ರವಲ್ಲದೆ ಇವರ ಅಧ್ಯಯನದಲ್ಲಿ ಮುನ್ಸಿಪಾಲಿಟಿಯವರು ಕೇಂದ್ರದಿಂದ ದೊರೆತ ಹಣವನ್ನು ಆರೋಗ್ಯದ ದೃಷ್ಟಿಯಲ್ಲಿ ಖರ್ಚು ಮಾಡುವುದನ್ನು ತಿಳಿಯಬಹುದು. ಅದೇ ರೀತಿಯಲ್ಲಿ ಗುಣಾತ್ಮಕ ಮಾಪನವನ್ನು ತೆಗೆದುಕೊಂಡು ಮಾನವ ಸಂಪನ್ಮೂಲ, ಸ್ಥಳೀಯ ಪ್ರದೇಶ ಆಯ್ಕೆಯ ವಿಧಿ ಮತ್ತು ಸ್ಥಳೀಯ ನಿರ್ವಹಣೆಗೆ ಕೇಂದ್ರದ ಮಧ್ಯಸ್ತಿಕೆಯ ಬಗ್ಗೆ ಚರ್ಚಿಸಿ ತಮ್ಮದೇ ರೀತಿಯಲ್ಲಿ ನಿರ್ವಹಣಾ ದೃಷ್ಟಿಯಲ್ಲಿ ವಿಶ್ಲೇಷಿಸಿದ್ದಾರೆ.

ಇತ್ತೀಚಿಗಿನ ದಿನಗಳಲ್ಲಿ ಸ್ಥಳೀಯ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ ಹೆಚ್ಚಿದೆ. ಪ್ರಮುಖವಾಗಿ, ಸ್ಥಳೀಯ ಸಂಸ್ಥೆಗಳು ಹೆಚ್ಚು ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿವೆ. ಆಯ-ವ್ಯಯಗಳನ್ನು ತಯಾರಿಸಿ ಪ್ರಜಾಪ್ರಭುತ್ವದ ನೆಲೆಯಲ್ಲಿ ವ್ಯವಸ್ಥಿತವಾಗಿ ಅಭಿವೃದ್ಧಿ ಕಾರ್ಯಗಳನ್ನು ನಿರ್ವಹಿಸುತ್ತವೆ. ಈ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳ ಆರ್ಥಿಕ ನಿರ್ವಹಣೆಯ ರೀತಿಯನ್ನು ವಿಶ್ಲೇಷಿಸುವುದು ಸೂಕ್ತ ಮತ್ತು ಅಗತ್ಯವಿದೆ.

### ಸಂಶೋಧನೆಯ ಸಮಸ್ಯೀಕರಣ

ಸ್ಥಳೀಯ ಸಂಸ್ಥೆಗಳಿಗೆ ಅದರದ್ದೇ ಆದ ಇತಿಹಾಸವಿದೆ. ಆದರೆ, ಅಭಿವೃದ್ಧಿ ಪರಿಕಲ್ಪನೆಗಳು ಬದಲಾಗುತ್ತಿರುವಾಗ ಸ್ಥಳೀಯ ಸಂಸ್ಥೆಗಳು ಅದಕ್ಕೆ ಹೊಂದಿಕೊಂಡು ಬದಲಾಗಬೇಕಾಗುತ್ತದೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಅವುಗಳ ಪಾತ್ರ ಬದಲಾದಾಗ ಅದಕ್ಕೆ ಹೊಂದಿಕೊಂಡು ಸ್ಥಳೀಯ ಸಂಸ್ಥೆಗಳು ಕಾರ್ಯ ನಿರ್ವಹಣೆ ಮಾಡಬೇಕಾಗುತ್ತದೆ. ಸ್ಥಳೀಯ ಅಭಿವೃದ್ಧಿಯಲ್ಲಿ ಸಂಸ್ಥೆಗಳ ಕಾರ್ಯ ನಿರ್ವಹಣೆಯ ರೀತಿ ಜನರ ಪಾಲ್ಗೊಳ್ಳುವಿಕೆಯನ್ನು ಹೊಂದಿಕೊಂಡಿರುತ್ತದೆ. ಆದ್ದರಿಂದ, ಸ್ಥಳೀಯ ಸಂಸ್ಥೆಗಳನ್ನು ವಿಶ್ಲೇಷಿಸುವಾಗ, ಸ್ಥಳೀಯ ಜನ ಪಾಲ್ಗೊಳ್ಳುವಿಕೆಯ ರೀತಿ, ಪ್ರಮುಖ ವಿಷಯವಾಗುತ್ತದೆ.

ಆರ್ಥಿಕವಾಗಿ, ಈ ಸಂಸ್ಥೆಗಳು ಅಭವೃದ್ಧಿ ಕಾರ್ಯಕ್ಕೆ ಪಾಲ್ಗೊಳ್ಳಲು ಬೇಕಾದ ಹಣಕಾಸಿನ ಮೂಲ ಮತ್ತು ಅವುಗಳ ನಿರ್ವಹಣೆ ಪ್ರಮುಖ ವಿಷಯ.

ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯ ವಿಶ್ಲೇಷಣೆ ಮಾಡುವಾಗ ಕಂದಾಯ ಮತ್ತು ಖರ್ಚು-ವೆಚ್ಚಗಳ ವಿಶ್ಲೇಷಣೆ ಮಾಡುವುದು ಪ್ರಾಮುಖ್ಯತೆ ಪಡೆಯುತ್ತದೆ. ಈ ಸಂಸ್ಥೆಗಳ ಆದಾಯದಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳ ಅನುದಾನ, ಸ್ಥಳೀಯ ತೆರಿಗೆಗಳು ಹಾಗೂ ಆಯಾ ಸಂಸ್ಥೆಗಳ ಚಟುವಟಿಕೆಗಳಿಂದ ಬರುವ ಆದಾಯಗಳು ಸೇರಿರುತ್ತದೆ. ಅಭಿವೃದ್ಧಿ ಕಾರ್ಯಕ್ರಮ ವೆಚ್ಚಗಳಲ್ಲಿಯೂ ಕೂಡ ಕೇಂದ್ರ ಮತ್ತು ರಾಜ್ಯ ಸರಕಾರದ ಕಾರ್ಯಕ್ರಮಗಳಿಗೆ ತಗಲುವ ವೆಚ್ಚ ಹಾಗೂ ಸ್ಥಳೀಯ ಅಭಿವೃದ್ಧಿಗೆ ತಗಲುವ ವೆಚ್ಚಗಳನ್ನು ಒಳಗೊಂಡಿರುತ್ತದೆ. ಆದುದರಿಂದ ಸ್ಥಳೀಯ ಸಂಸ್ಥೆಯ ವಿತ್ತೀಯ ನಿರ್ವಹಣೆಯ ವಿಶ್ಲೇಷಣೆ ಮಾಡುವಾಗ ಈ ಅಂಶಗಳನ್ನು ಗಮನಿಸಬೇಕಾಗುತ್ತದೆ.

## ಸಂಶೋಧನಾ ಪ್ರಶ್ನೆಗಳು

ಸಾಹಿತ್ಯ ಅವಲೋಕನಾ ಮಾಡುವಾಗ ಹಲವು ಸಂಶೋಧನಾ ಪ್ರಶ್ನೆಗಳು ಗಮನಕ್ಕೆ ಬರುತ್ತದೆ. ಅವುಗಳೆಂದರೆ,

1) ಸ್ಥಳೀಯ ಸಂಸ್ಥೆಗಳ ಜವಾಬ್ದಾರಿ ಏನು?
2) ಸ್ಥಳೀಯ ಸಂಸ್ಥೆಗಳ ನಿರ್ವಹಣೆಗೆ ಹಣಕಾಸಿನ ಮಹತ್ತ್ವ ಏನು?
3) ವಿವಿಧ ಮೂಲಗಳಿಂದ ಬರುವ ಹಣಕಾಸನ್ನು ಸ್ಥಳೀಯ ಸಂಸ್ಥೆಗಳು ಪರಿಣಾಮವಾಗಿ ನಿರ್ವಹಿಸುವಲ್ಲಿ ಎಷ್ಟು ಯಶಸ್ವಿಯಾಗಿದೆ?

4) ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿ ಕಾರ್ಯದಲ್ಲಿ ಪಾಲ್ಗೊಳ್ಳುವಾಗ ಖರ್ಚು-ವೆಚ್ಚಗಳನ್ನು ನಿರ್ವಹಿಸುವ ನೀತಿ ಹೇಗೆ ಎಂದು ತಿಳಿಯುವುದು.

ಒಟ್ಟಿನಲ್ಲಿ ಸ್ಥಳೀಯ ಸಂಸ್ಥೆಯಲ್ಲಿ ವಿತ್ತೀಯ ನಿರ್ವಹಣೆಯ ರೀತಿ ನೀತಿಯನ್ನು ವಿಶ್ಲೇಷಣೆ ಮಾಡುವುದರಿಂದ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

## ಸಂಶೋಧನೆಯ ಉದ್ದೇಶಗಳು

ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರವನ್ನು ವಿಶ್ಲೇಷಣೆ ಮಾಡುವುದು ಈ ಅಧ್ಯಯನದ ಉದ್ದೇಶ. ಅದರಲ್ಲೂ, ಇತೀಚಿಗಿನ ದಿನಗಳಲ್ಲಿ ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಹೆಚ್ಚು ತೊಡಗಿಸಿಕೊಳ್ಳುವುದರಿಂದ ಅವುಗಳ ವಿತ್ತೀಯ ನಿರ್ವಹಣೆಯ ಕುರಿತು ವಿಶ್ಲೇಷಣೆ ಮಾಡುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಈ ಅಧ್ಯಯನದ ನಿರ್ದಿಷ್ಠ ಉದ್ದೇಶಗಳೆಂದರೆ,

1) ಭಾರತದಲ್ಲಿ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯಲ್ಲಿ ಪಾತ್ರ ಮಾಡುವ ವಿಶ್ಲೇಷಣೆ.
2) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಳೀಯ ಸಂಸ್ಥೆಗಳ ಹಣಕಾಸಿನ ನಿರ್ವಹಣೆಯ ಬಗ್ಗೆ ಮೌಲ್ಯಮಾಪನ ಮಾಡುವುದು.
3) ದಕ್ಷಿಣಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ಹಣಕಾಸು, ಕೇಂದ್ರ ಮತ್ತು ರಾಜ್ಯ ಸರಕಾರಗಳ ಅನುದಾನ, ಸ್ಥಳೀಯ ಸಂಸ್ಥೆಯ ತೆರಿಗೆ ಮತ್ತು ಆದಾಯ, ಆರ್ಥಿಕ ಚಟುವಟಿಕೆಗಳ ಪರೀಕ್ಷೆ ಮಾಡುವುದು.
4) ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿಯಲ್ಲಿ ಹೆಚ್ಚು ಪಾಲುಗೊಳ್ಳುವಿಕೆಗೆ ಸಲಹೆ/ಸೂಚನೆ ನೀಡುವುದು.

## ಸಂಶೋಧನೆಯ ಊಹೆಗಳು (ಹೈಪೋಥಿಸಿಸ್)

1) ಸ್ಥಳೀಯು ಸಂಸ್ಥೆಗಳು ಹೆಚ್ಚಿನ ಪ್ರಮಾಣದಲ್ಲಿ ಆದಾಯ ಮತ್ತು ಅನುದಾನಗಳನ್ನು ಪಡೆಯುತ್ತದೆ.
2) ಸ್ಥಳೀಯ ಸಂಸ್ಥೆಗಳು ನಿಯೋಜಿಸಿದ ಗುರಿಗಳನ್ನು ಸಾಧಿಸುತ್ತದೆ.
3) ಸ್ಥಳೀಯ ಸಂಸ್ಥೆಗಳು ಸ್ಥಳೀಯ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ.

## ಸಂಶೋಧನೆಯ ವಿಧಾನಗಳು

ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯನ್ನು ವಿಶ್ಲೇಷಿಸುವುದು ವೈಧಾನಿಕತೆಯ ಒಂದು ಸವಾಲೇ ಹೌದು. ಸಾಮಾನ್ಯವಾಗಿ, ಸಾರ್ವಜನಿಕ ವಿತ್ತೀಯ ನಿರ್ವಹಣೆಯನ್ನು ಮಾಡುವಾಗ ರಾಜಸ್ವ ಹಾಗೂ ಸಾರ್ವಜನಿಕ ವೆಚ್ಚಗಳನ್ನು ಗಮನಿಸಲಾಗುತ್ತದೆ. ಈ ಅಧ್ಯಾಯದಲ್ಲಿ ಸ್ಥಳೀಯ ಸಂಸ್ಥೆಗಳ ಅನುದಾನಗಳ ವಿಶ್ಲೇಷಣೆ, ತೆರಿಗೆಯಿಂದ ಬರುವ ಹಣಕಾಸಿನ ನಿರ್ವಹಣೆ, ಖರ್ಚು-ವೆಚ್ಚಗಳ ವಿಶೇಷಣೆ ಮಾಡಲಾಗಿದೆ. ಮಾತ್ರವಲ್ಲದೆ, ಆಡಳಿತ ಖರ್ಚುಗಳ ಬಗ್ಗೆ ಕೂಡ ವಿಶ್ಲೇಷಣೆ ಮಾಡಲಾಗಿದೆ.

ಈ ಅಧ್ಯಾಯಕ್ಕಾಗಿ ಅನುಷಂಘಿಕ ಹಾಗೂ ಪ್ರಾಥಮಿಕ ದತ್ತಾಂಶವನ್ನು ಸಂಗ್ರಹಿಸಲಾಗಿದೆ. ಮುಖ್ಯವಾಗಿ ಅನುಷಂಘಿಕ ದತ್ತಾಂಶಗಳನ್ನು ಹೆಚ್ಚಾಗಿ ಉಪಯೋಗಿಸಿ ಸ್ಥಳೀಯ ಸಂಸ್ಥೆಗಳ ವಿಶ್ಲೇಷಣೆ ಮಾಡಲಾಗಿದೆ. ಪ್ರಾಥಮಿಕ ದತ್ತಾಂಶಗಳ ಸಲುವಾಗಿ ಅಧಿಕಾರಿಗಳ (ಮಹಾನಗರ ಪಾಲಿಕೆ) ಜೊತೆಯಲ್ಲಿ ಚರ್ಚೆಮಾಡಿ ದತ್ತಾಂಶಗಳನ್ನು ಸಂಗ್ರಹಿಸಲಾಗಿದೆ. ಈ ಸಂಶೋಧನೆಯಲ್ಲಿ ಸಂಖ್ಯಾಶಾಸ್ತ್ರದ ಯಂತ್ರಗಳಾದ ಅಭಿವೃದ್ಧಿ ದರ, ಶೇಕಡಾದರ, ಪ್ರಮಾಣ ದರ, ಬೆಳವಣಿಗೆ ದರವನ್ನು ಮಾಪನದ ಮೂಲಗಳಾಗಿ ಉಪಯೋಗಿಸಲಾಗಿದೆ. ವಿತ್ತೀಯ ನಿರ್ವಹಣೆಗೆ ಸಂಬಂಧಿಸಿದ ಹಲವು ವರ್ಷಗಳ ಬಗ್ಗೆ ಅಭಿಪ್ರಾಯ ಸಂಗ್ರಹಿಸಿ ಅದರ ವಿಶ್ಲೇಷಣೆ ಮಾಡಲಾಗಿದೆ.

## ಅಧ್ಯಯನದ ಮಿತಿಗಳು

"ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ". ಈ ಅಧ್ಯಯನವು ವಿತ್ತೀಯ ನಿರ್ವಹಣೆಗೆ ಸಂಬಂಧಪಟ್ಟ ಅನೇಕ ಸಿದ್ಧಾಂತಗಳು, ಅಧ್ಯಯನದ ವಿಧಾನಗಳನ್ನು ಒಳಗೊಂಡಿರುವುದಿಲ್ಲ. ಈ ಅಧ್ಯಯನದಲ್ಲಿ ಸ್ಥಳೀಯ ಸಂಸ್ಥೆಗಳ ಹಣಕಾಸಿಗೆ ಸಂಬಂಧಿಸಿದ ಕೆಲವೇ ಚರಗಳನ್ನು (ಆದಾಯ, ತೆರಿಗೆ, ಖರ್ಚು-ವೆಚ್ಚಗಳು ಇತ್ಯಾದಿ) ಮಾತ್ರ ವಿಶ್ಲೇಷಿಸಲಾಗಿದೆ. ಮಾತ್ರವಲ್ಲದೇ, ಈ ಅಧ್ಯಯನವನ್ನು ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರು ತಾಲೂಕು ವ್ಯಾಪ್ತಿಯಲ್ಲಿ ಮಾತ್ರ ನಡೆಸಿರುವುದರಿಂದ, ಇದರ ಫಲಿತಾಂಶಗಳು ಬೇರೆ ಪ್ರದೇಶಗಳಲ್ಲಿಯೂ ಅದೇ ಆಗಿರುತ್ತದೆ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಈ ಅಧ್ಯಯನವು ಕೆಲವು ಮಿತಿಗಳನ್ನು ಒಳಗೊಂಡಿರುತ್ತದೆ –

- ಕಿರು ಅವಧಿಯ ಅಧ್ಯಯನ
- ಮಿಶ್ರ ಜನರ ವಯೋಗುಂಪುಗಳು
- ಭೌಗೋಳಿಕ ಅಂತರಗಳು

ಮಾತ್ರವಲ್ಲದೆ ದತ್ತಾಂಶಗಳ ಸಂಗ್ರಹಣೆಯಲ್ಲಿಯೂ ಮಿತಿ ಇರುತ್ತದೆ. ಈ ಅವಧಿಯಲ್ಲಿ ಉದ್ದೇಶಕ್ಕೆ ಸಂಬಂಧವಾದ ದತ್ತಾಂಶಗಳನ್ನು ಕ್ರೋಢೀಕರಿಸಿ, ವಿಶ್ಲೇಷಣೆ ಮಾಡಿ ಪ್ರಬಂಧವನ್ನು ರಚಿಸಲಾಗಿದೆ.

## ಪಠ್ಯ ನಿರೂಪಣೆ

'ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ' ಎಂಬ ಶೀರ್ಷಿಕೆಯಲ್ಲಿರುವ ಈ ಅಧ್ಯಯನದ ವರದಿಯನ್ನು ಐದು ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ. ವರದಿಯ ಅಧ್ಯಯನದ ಸ್ವರೂಪ ಈ ರೀತಿಯಲ್ಲಿದೆ.

| ಅಧ್ಯಾಯ 1 | | **ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ:** "ಪ್ರವೇಶ", ಈ ಅಧ್ಯಯನದಲ್ಲಿ ಸ್ಥಳೀಯ ಸಂಸ್ಥೆಗಳ ಪೀಠಿಕೆ, ಸಾಹಿತ್ಯಾವಲೋಕನ, ಸಮಸ್ಯೀಕರಣ, ಸಂಶೋಧನಾ ಪ್ರಶ್ನೆಗಳು, ಉದ್ದೇಶಗಳು, ಊಹೆಗಳು, ವಿಧಾನಗಳು, ಮಿತಿಗಳನ್ನು ಒಳಗೊಂಡಿದೆ. |
|---|---|---|
| ಅಧ್ಯಾಯ 2 | | **ಭಾರತದ ಸಮಾಜೋ-ಆರ್ಥಿಕ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ:** ಪೀಠಿಕೆ, ಸ್ಥಳೀಯ ಸಂಸ್ಥೆಗಳ ಉಗಮ, ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯ ನಂತರ, ಗ್ರಾಮೀಣ ಸ್ಥಳೀಯ ಸಂಸ್ಥೆ, ಪಾಲುಗೊಳ್ಳುವಿಕೆ ಮತ್ತು ವಿಕೇಂದ್ರಿಕೃತ, ಕರ್ನಾಟಕದಲ್ಲಿ ಸ್ಥಳೀಯ ಸಂಸ್ಥೆ ಆಡಳಿತ. |
| ಅಧ್ಯಾಯ 3 | | **ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿ ಮತ್ತು ಸ್ಥಳೀಯ ಸಂಸ್ಥೆಗಳು:** ಪೀಠಿಕೆ, ದಕ್ಷಿಣಕನ್ನಡ ಜಿಲ್ಲೆಯ ಪಕ್ಷಿನೋಟ, ಜಿಲ್ಲಾದಾಯ, ಸ್ಥಳೀಯ ಸಂಸ್ಥೆಗಳ ಇತಿಹಾಸ, ಸ್ವರೂಪ, ಪಂಚಾಯತ್ ರಾಜ್ ವ್ಯವಸ್ಥೆ, ನಗರ ಸ್ಥಳೀಯಾಡಳಿತ ಸಂಸ್ಥೆಗಳು, ದಕ್ಷಿಣಕನ್ನಡ ಜಿಲ್ಲೆಯಲ್ಲಿ ಬ್ಯಾಂಕ್ ಮತ್ತು ಸ್ಥಳೀಯ ಸಹಕಾರಿ ಸಂಸ್ಥೆಗಳು. |
| ಅಧ್ಯಾಯ 4 | | **ವಿತ್ತೀಯ ನಿರ್ವಹಣೆ :** ಪೀಠಿಕೆ, ಪ್ರವೇಶ, ಜಿಲ್ಲಾ ಪಂಚಾಯತ್‌ಗಳಲ್ಲಿ ವಿತ್ತೀಯ ನಿರ್ವಹಣೆ, ಮಹಾನಗರ ಪಾಲಿಕೆಯ ನಿರ್ವಹಣೆ, ಆಸ್ತಿಗಳು, ಆದಾಯ ಮತ್ತು ಅನುದಾನ ನಿರ್ವಹಣೆ, ಹೂಡಿಕೆಗಳು, ಖರ್ಚು-ವೆಚ್ಚಗಳ ನಿರ್ವಹಣೆ, ವಿತ್ತೀಯ ನಿರ್ವಹಣೆಯ ಸೂಚಕಗಳು. |
| ಅಧ್ಯಾಯ 5 | | **ಸಾರಾಂಶ ಮತ್ತು ಸಮಾಪ್ತಿ**<br>ಸಲಹೆ ಸೂಚನೆಗಳನ್ನು, ಕಂಡುಕೊಂಡ ಫಲಿತಾಂಶಗಳನ್ನು ವಿವರಿಸಲಾಗಿದೆ. ಮಾತ್ರವಲ್ಲದೆ ಸ್ಥಳೀಯ ಸಂಸ್ಥೆಗಳಿಗೆ ಸೂಕ್ತ ಶಿಫಾರಸುಗಳನ್ನು ನೀಡಲಾಗಿದೆ. |

ಅಧ್ಯಾಯ –2

# ಭಾರತದ ಸಮಾಜೋ–ಆರ್ಥಿಕ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ

- ಪೀಠಿಕೆ
- ಸ್ಥಳೀಯ ಸಂಸ್ಥೆಗಳ ಉಗಮ
- ಸ್ವಾತಂತ್ರ್ಯ ಪೂರ್ವ
- ಸ್ವಾತಂತ್ರ್ಯ ನಂತರ
- ಗ್ರಾಮೀಣ ಸ್ಥಳೀಯ ಸಂಸ್ಥೆ
- ಪಾಲುಗೊಳ್ಳುವಿಕೆ ಮತ್ತು ವಿಕೇಂದ್ರೀಕೃತ ಆಡಳಿತ
- ಕರ್ನಾಟಕದಲ್ಲಿ ಸ್ಥಳೀಯ ಸಂಸ್ಥೆ ಆಡಳಿತ

**ಪೀಠಿಕೆ**

ಹಲವು ವರ್ಷಗಳ ಇತಿಹಾಸವಿರುವ ಭಾರತದಲ್ಲಿ ವಿಕೇಂದ್ರಿಕೃತ ಆಡಳಿತವನ್ನು ಅವಲೋಕನ ಮಾಡಬಹುದಾಗಿದೆ. ಇದನ್ನು ನಾವು ಉಪನಿಷತ್, ವೇದ, ಪುರಾಣದಲ್ಲಿ ಕಾಣಸಿಗುತ್ತದೆ ಎಂಬುದನ್ನು ತಿಳಿಯಬಹುದಾಗಿದೆ [3]. ಇದೇ ರೀತಿಯಲ್ಲಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯದ ನಂತರ ವಿಶ್ಲೇಷಣೆ ಮಾಡಿ ವಿಕೇಂದ್ರಿಕೃತ ಆಡಳಿತದ ಪ್ರಾಮುಖ್ಯತೆಯ ಮಟ್ಟವನ್ನು ಹೆಚ್ಚಳ ಪಡೆಯುವುದನ್ನು ತಿಳಿಯಬಹುದು. ಸ್ಥಳೀಯ ಸಂಸ್ಥೆಗಳು ಸ್ಥಳೀಯವಾಗಿ ಆಡಳಿತವನ್ನು ಸಣ್ಣ ಪ್ರದೇಶವನ್ನು ಒಳಗೊಂಡು ಹಳ್ಳಿ ನಗರ ಅಥವಾ ಪಟ್ಟಣದಲ್ಲಿ ನಡೆಯುತ್ತದೆ. ಭಾರದಲ್ಲಿ ಸ್ಥಳೀಯ ಸಂಸ್ಥೆಗಳು ಸ್ಥಳೀಯ ಯೋಜನೆ, ಅಭಿವೃದ್ಧಿ ಮತ್ತು ಆಡಳಿತವನ್ನು ಒಳಗೊಂಡು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಹರಡಿಗೊಂಡಿದೆ.

ಸ್ಥಳೀಯ ಹಣಕಾಸು ಅಂದರೆ ಹಣಕಾಸಿಗೆ ಸಂಬಂಧ ಪಟ್ಟ ಸಮಸ್ಯೆ ಎಂದೇ ಹೇಳಬಹುದು, ಏಕೆಂದರೆ ಇಲ್ಲಿ ಆದಾಯ, ಖರ್ಚಿಗೆ ಸಂಬಂಧಪಟ್ಟ ರೀತಿಯಲ್ಲಿ ಸ್ಥಳೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತದೆ. ಆದರೆ ನಾವು ಇದನ್ನು ಕೂಲಂಕುಷವಾಗಿ ತಿಳಿಯಬೇಕಾದರೆ ಸಾರ್ವಜನಿಕ ಹಣಕಾಸಿನ ಬಗ್ಗೆ ತಿಳಿಯಬೇಕಾಗುತ್ತದೆ. ಯಾವ ತರದಲ್ಲಿ ಕೇಂದ್ರ, ರಾಜ್ಯ, ಸ್ಥಳೀಯ ಸಂಸ್ಥೆಗಳ ಖರ್ಚು ಮಾಡುತ್ತದೆ. ಯಾವ ರೀತಿಯಲ್ಲಿ ಕಂದಾಯವನ್ನು ತೆರಿಗೆ ಮತ್ತು ತೆರಿಗೆತ್ತಾರ ವಿಧಾನದ ಮೂಲಕ ಹಣ ಸಂಗ್ರಹಿಸಿ ಅಭಿವೃದ್ಧಿ ಪಥದತ್ತ ಮುನ್ನುಗುವುದನ್ನು ತಿಳಿಯಬಹುದು. ಈ ಹಣದಿಂದ ಸ್ಥಳೀಯ ವ್ಯಾಪಾರ, ಸ್ಥಳೀಯ ಸೇವೆ ಮತ್ತು ಸ್ಥಳೀಯ ಪ್ರಜ್ಞಾವಂತ ಕಾರ್ಯಕ್ಕೆ ಆಸ್ತು ದೊರೆತ ರೀತಿಯಲ್ಲಿ ಸಹಾಯವಾಗುತ್ತದೆ.

ಜಾಗತೀಕರಣ ನೆಲೆಯಲ್ಲಿ ಮುಂದೆ ನಡೆಯುತ್ತಿರುವ ದೇಶದಲ್ಲಿ ಯಾವ ತರಹದ ಬೆಳವಣಿಗೆಯು ಅಭಿವೃದ್ಧಿ ಪಥದಂತೆ ನಡೆಯುತ್ತಿದೆ ಎಂಬುದನ್ನು ತಿಳಿಯಬಹುದು. ಇತ್ತೀಚಿಗೆ ಅಭಿವೃದ್ಧಿ ಪರಿಭಾಷೆಯಲ್ಲಿ, ಸಾಮಾಜಿಕ ಮೂಲಭೂತ ಬಂಡವಾಳಕ್ಕೆ (Sociai Over Head Capital) ಹೆಚ್ಚಿನ ಮಹತ್ತ್ವ ದೊರೆಯುವುದನ್ನು ನೋಡುತ್ತವೆ. ಇದರಲ್ಲಿ ನಾವು ನೀರಿನ ಪೂರೈಕೆ, ಒಳಚರಂಡಿ, ಘನತ್ಯಾಜ್ಯ ವಿಲೇವಾರಿ, ಸಾರ್ವಜನಿಕ ಆರೋಗ್ಯ, ಶಿಕ್ಷಣ ನೈಮೂಲ್ಯಕ್ಕೆ ಹೆಚ್ಚಿನ ಒತ್ತು ನೀಡಲಾಗಿದೆ. ಆದುದರಿಂದ ಈ ರೀತಿಯ ಬೆಳವಣಿಗೆಯುನ್ನು ಕೇಂದ್ರ ಸರಕಾರ ನಿರ್ವಹಿಸಲು ಸಾಧ್ಯವಾಗುವುದಿಲ್ಲ ಆದುದರಿಂದ ನಾವು ಆಡಳಿತದಲ್ಲಿ ಹಂಚಿಕೆಯನ್ನು ನೋಡುತ್ತೇವೆ. ಭಾರತದಂತಹ ವಿಶಾಲವಾದ ದೇಶದಲ್ಲಿ ನಾವು ಕೇಂದ್ರ ಸರಕಾರವನ್ನು, 28 ರಾಜ್ಯ ಸರಕಾರ ಮತ್ತು 7 ಐಕ್ಯಮತ ಭೂ ಭಾಗ ಆಡಳಿತ ನಡೆಸುವುದನ್ನು ನೋಡುತ್ತೇವೆ. ಈ ರೀತಿಯ ಆಡಳಿತವು ಎಲ್ಲ ಜನರನ್ನು ತಲುಪಲು ಸಾಧ್ಯವಾಗುವುದಿಲ್ಲ ಮತ್ತು ದಕ್ಷ ಆಡಳಿತವನ್ನು ನೀಡಲು ವಿಕೇಂದ್ರಿಕೃತ ಆಡಳಿತವು ಸಹಕಾರಿಯಾಗುತ್ತದೆ. ಆದೇ ರೀತಿಯಲ್ಲಿ ವಿಕೇಂದ್ರಿಕೃತ ಆಡಳಿತ ರಾಷ್ಟ್ರದಲ್ಲಿ ನಾವು ಆಡಳಿತವನ್ನು ಹಳ್ಳಿ ಪ್ರದೇಶದ ಪಂಚಾಯತ್, ಪಂಚಾಯತ್ ಸಮಿತಿ, ಜಿಲ್ಲಾ ಪರಿಷತ್, ಮುನಿಸಿಪಲ್ ಕಮಿಟಿ, ಪಟ್ಟಣ ಸಮಿತಿ, ದಂಡು ಪ್ರದೇಶದ ಸಮಿತಿ ಇತ್ಯಾದಿಗಳು ನಗರ ಪ್ರದೇಶದ ಅನುಕರಣೆ ಮಾಡಿ ಅಭಿವೃದ್ಧಿ ಪಥದತ್ತ ಮುನ್ನಡೆಸುತ್ತವೆ. ಆದರೆ ಅಭಿವೃದ್ಧಿಯು ನಿಧಾನಗತಿಯಲ್ಲಿ ನಡೆಯುವುದನ್ನು ನಾವು ಕೇಂದ್ರ ಮತ್ತು ರಾಜ್ಯ ಸರಕಾರದ ಆಡಳಿತದಲ್ಲಿ ನೋಡುತ್ತೇವೆ. ಆದರೆ ಸ್ಥಳೀಯ ಸಂಸ್ಥೆಗಳ ವಿಂಗಡನೆಯಿಂದ ಅಭಿವೃದ್ಧಿಯು ಒಂದು ಸುಸಜ್ಜಿತ ಆಡಳಿತವನ್ನು ನೀಡುವುದನ್ನು ನೋಡುತ್ತೇವೆ. ಆದರೆ ಸ್ಥಳೀಯವಾಗಿ ಸ್ಥಳೀಯರಿಂದಲೇ

ಅಭಿವೃದ್ಧಿ ನಡೆಯುವುದನ್ನು ನೋಡುತ್ತೇವೆ ಉದಾಹರಣೆಗೆ, ಬೀದಿ ದೀಪಗಳು ಉದ್ಯಾನವನ ನಿರ್ಮಾಣ, ಜಾಡಮಾಲಿನದ ಕೆಲಸವು ಸ್ಥಳೀಯ ಸಂಸ್ಥೆಗಳು ಕೈಗೊಳ್ಳುತ್ತದೆ. ಈ ರೀತಿಯ ನಿರ್ವಹಣೆಯನ್ನು ಸ್ಥಳೀಯ ಸಂಸ್ಥೆಗಳು ಸರಳವಾಗಿ ಮಾಡುತ್ತದೆ.

## ಸ್ಥಳೀಯ ಸಂಸ್ಥೆಗಳ ಉಗಮ

ಸ್ಥಳೀಯ ಸಂಸ್ಥೆಗಳು ದೇಶದ ಆಡಳಿತದ ಆಧಾರ ಸ್ತಂಭವಾಗಿದೆ. ಸ್ಥಳೀಯ ಸಂಸ್ಥೆಗಳಿಗೆ ತನ್ನ ಪ್ರದೇಶದ ಬೇಕು-ಬೇಡಗಳು ಅರಿವು ಇರುತ್ತದೆ ಮತ್ತು ಜನರ ಕಷ್ಟಗಳಿಗೆ ಸ್ಪಂದನ ಪೂರಕವಾಗಿದೆ. ಇದು ಜನರ ಮತ್ತು ಸರಕಾರದ ನಡುವೆ ಸೇತುವೆಯ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಈ ರೀತಿಯ ಆಡಳಿತದಿಂದ ಜನರ ಏಳಿಗೆಯಾಗಲು ಸಹಕರಿಸುತ್ತದೆ ಮಾತ್ರವಲ್ಲ ಪ್ರಾಕೃತಿಕ, ಮಾನಸಿಕ, ಆರ್ಥಿಕ ಮತ್ತು ಸಾಮಾಜಿಕ ಏಳಿಗೆ ಎಂದು ಪರಿಗಣಿಸಿ ಪ್ರಭುತ್ವ ದೇಶದಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ ಅಲ್ಲಗಳೆಯುವಂತಿಲ್ಲ.

## ಸ್ವಾತಂತ್ರ್ಯ ಪೂರ್ವ

ಸ್ಥಳೀಯ ಸಂಸ್ಥೆಗಳ ಆಡಳಿತವನ್ನು ನಾವು ಬಹಳ ಹಿಂದಿನಿಂದಲೂ ಕಂಡುಬರುವುದನ್ನು ಪರಾಮರ್ಶಿಸಬಹುದು. ಇದನ್ನು ನಾವು ಹಳ್ಳಿಗಳಲ್ಲಿ ಸ್ಥಿರವಾದ ಸ್ವಾಯತ್ತತೆಯನ್ನು ನೋಡುತ್ತೇವೆ. ಹಿಂದಿನ ಕಾಲದಲ್ಲಿ ಹಳ್ಳಿಗಳಲ್ಲಿ ನಾವು ಪಂಚಾಯತನ್ನು ನೋಡುತ್ತೇವೆ. ಇದರಲ್ಲಿ ಐದು ಜನ ಪಂಚರು ನ್ಯಾಯವನ್ನು, ಆಡಳಿತವನ್ನು ಯಾವುದೇ ರೀತಿಯ ತೀರ್ಪನ್ನು ಕೊಡುತ್ತಿದ್ದದ್ದು ವಿಶ್ಲೇಷಣೆ ಮಾಡಬಹುದು ಮಾತ್ರವಲ್ಲದೆ ಇವರು ನಾಗರಿಕ ಮತ್ತು ಆಪಾದಿತ ಅಥವಾ ತಕ್ಸೀರುದಾರದ ಬಗ್ಗೆ ನ್ಯಾಯ ದೊರಕಿಸಿ ಕೊಡುತ್ತಿದ್ದರು. ಅದಲ್ಲದೇ ಹಳ್ಳಿಯ ಸ್ವಚ್ಛತೆಯ ಬಗ್ಗೆ, ರಸ್ತೆ, ದೇವಾಲಯಗಳ ನಿರ್ವಹಣೆ, ನೀರಾವರಿ ಇತ್ಯಾದಿಗಳ ಬಗ್ಗೆ ಪ್ರಾಮುಖ್ಯತೆ ನೀಡಿ ಕಾರ್ಯನಿರ್ವಹಿಸುತ್ತಿದ್ದವು. ಅದೇ ತರವಲ್ಲಿ ಗಣಗಳು (Ganas) ಕಾರ್ಯನಿರ್ವಹಿಸುತ್ತಿದ್ದವು. ಅದನ್ನೇ ನಾವು ಆಧುನಿಕ ಕಾಲದ ಮುನಿಸ್ಸಿಪಾಲಿಟಿ ಎಂದು ಕರೆಯಲಾಗುತ್ತದೆ. ಇದರಲ್ಲಿ ಕೂಡ 5 ರಿಂದ 7 ಸದಸ್ಯರಿದ್ದು ಆಡಳಿತವನ್ನು ನಡೆಸುತ್ತಾರೆ. ಅದೇ ತರದಲ್ಲಿ ಮೊಗಲ್ ರಾಜರ ಕಾಲದಲ್ಲಿ ನಗರ ಪ್ರದೇಶದ ಜೀವನಕ್ಕೆ ಹೆಚ್ಚು ಒತ್ತು ನೀಡಿ ಹಳ್ಳಿಗಳನ್ನು ಕಡೆಗಣಿಸಲಾಗಿದೆ ಎಂಬುದನ್ನು ತಿಳಿಯಬಹುದು. ಆದರೆ ಹಳ್ಳಿಯ ಆಡಳಿತದಲ್ಲಿ ಯಾವುದೇ ತರಹದ ಬದಲಾವಣೆಗೆಯನ್ನು ನಾವು ನೋಡುವುದಿಲ್ಲ. ಇಲ್ಲಿ ನಾವು ಕೋಟವಾಲ (Kotwal)ಗಳನ್ನು ಎಲ್ಲ ತರಹದ ಕಾರ್ಯನಿರ್ವಹಿಸುವುದನ್ನು ನೋಡುತ್ತೇವೆ.

ಬ್ರಿಟೀಷರ ಆಡಳಿತ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳಾದ ನಗರ ಮತ್ತು ಹಳ್ಳಿಯ ಆಡಳಿತವನ್ನು ಕೊನೆಗೊಳಿಸಿತು ಮತ್ತು ಕೇಂದ್ರಿಕೃತ ಆಡಳಿತಕ್ಕೆ ಪ್ರಾಮುಖ್ಯತೆಯನ್ನು ನೀಡಿ East India Company ಯನ್ನು ಹುಟ್ಟುಹಾಕಿತು. ಆದರೆ ಸರಕಾರಕ್ಕೆ ತನ್ನ ತಪ್ಪಿನ ಅರಿವು ಬಹುಬೇಗನೆಯಾಗಿ, ತಪ್ಪಿನ ಹುಡುಕಾಟವನ್ನು ಘೋಷಿಸಿತು, ಆದರೆ ಅಲ್ಲಿಯೂ ಕೂಡ ದೊಡ್ಡ ನಗರಗಳಿಂದ ಪ್ರಾರಂಭ ಮಾಡಿ, ಸ್ವಲ್ಪ ಮಾತ್ರವೇ ಅಧಿಕಾರವನ್ನು ಉಪಯೋಗಿಸಿಕೊಂಡಿತು. 1687ರಲ್ಲಿ ಮದರಸ್ (Madras) ನಲ್ಲಿ Royal Charter ರನ್ನು ಅನುಷ್ಠಾನಕ್ಕೆ ತಂದು ಮುನಿಸ್ಸಿಪಾಲಿಟಿಯನ್ನು ಹುಟ್ಟುಹಾಕಿತು. 1793ರಲ್ಲಿ Royal Charter Act ಪ್ರಕಾರ ಬ್ರಿಟಿಷ್ ಸಂವಿಧಾನವು ಮುನಿಸ್ಸಿಪಾಲಿಟಿಯ ಹುಟ್ಟಿಗೆ ಚಾಲನೆ ದೊರೆತ ರೀತಿಯಲ್ಲಿ

ಕಾರ್ಯನಿರ್ವಹಿಸಿತು. ಇದು ಪೂರ್ಣ ರೀತಿಯಲ್ಲಿ ಆಡಳಿತ ನಡೆಸಲು ಪ್ರಾರಂಭ ಮಾಡಿ 1842 ರಿಂದ 1850 ಮತ್ತು 1856 ರ ಶಾಸನದ ಪ್ರಕಾರ ಮುನಿಸ್ಸಿಪಾಲ್ ಕಮಿಷನರ್‌ರನ್ನು (Commissioners) ನೇಮಿಸಿತು. 1873ರಲ್ಲಿ Lord Mayo ರವರು ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲು ಸಹಕಾರ ನೀಡಿದರು. 1919–1947ರ ನಡುವೆ ಬೇರೆ ಬೇರೆ ಶಾಸನಗಳು ಜಾರಿಗೆ ಬಂದವು, ಆದರೆ ಸಂಸ್ಥೆಗಳ ಕಾರ್ಯವು ಸಫಲಕಾಣಸಿಗಲಿಲ್ಲ. ಭಾರತದ ಸ್ವಾತಂತ್ರ್ಯದ ನಂತರ ಸರ್ಕಾರಕ್ಕೆ ಜನರನ್ನು ಕಷ್ಟಗಳಿಂದ ಮೇಲೆ ಎತ್ತುವ ನಿರ್ಣಯ ಮಾಡುವಂತಾಗಿದೆ. ಭಾರತದ ಸಂವಿಧಾನದಲ್ಲಿ 1965ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆತು ಸ್ಥಳೀಯ ಸಂಸ್ಥೆಗಳಿಗೆ 3 tier ಆಡಳಿತವನ್ನು ನೀಡಿತು.

ಭಾರತದಲ್ಲಿ ಸ್ಥಳೀಯ ಸಂಸ್ಥೆಗಳ ಉಗಮವನ್ನು ಮೂರು ಮುಖ್ಯ ಘಟ್ಟದಲ್ಲಿ ಪರಿಗಣಿಸಿ ವಿಮರ್ಶಿಸಬಹುದು, ಅವುಗಳೆಂದರೆ,

1. ಪ್ರಾಚೀನ ಮತ್ತು ಮೆಡಿವಲ್ ಕಾಲ
2. ಬ್ರಿಟಿಷರ ಕಾಲ
3. ಸ್ವಾತ್ರಂತ್ರ್ಯ ನಂತರದ ಕಾಲ

## ಪ್ರಾಚೀನ ಮತ್ತು ಮೆಡಿವಲ್ ಕಾಲದ ಸ್ಥಳೀಯ ಸಂಸ್ಥೆ:

ಪ್ರಾಚೀನ ಕಾಲದ ಬರವಣಿಗೆಯಿಂದ ಸಮಾಜದಲ್ಲಿರುವ ಜಾತಿ ಅಥಾವ ಗುಂಪುಗಳ ಬಗ್ಗೆ ವಿವರಣೆ ನೀಡಿಕೆಗಿಂತಲೂ ಸ್ಥಳೀಯ ಸಂಸ್ಥೆಗಳಿಂದ ಎಲ್ಲ ಜನರ ಬೆಳವಣಿಗೆಯು ಸಾಧ್ಯವಾಯಿತು. ಏಕೆಂದರೆ ಈ ಕಾಲ ಘಟ್ಟದಲ್ಲಿ ಎಲ್ಲಾ ಆಡಳಿತವೂ ಸ್ಥಳೀಯವಾದ ರೀತಿಯಲ್ಲಿ ನಡೆಯುತ್ತಿತ್ತು.

## ಬ್ರಿಟೀಷರ ಕಾಲದಲ್ಲಿ ಸ್ಥಳೀಯ ಸಂಸ್ಥೆ:

ಬ್ರಿಟೀಷರ ಕಾಲದ ಸ್ಥಳೀಯ ಸಂಸ್ಥೆಗಳು 3 ಕಾಲ ಘಟ್ಟದಲ್ಲಿ ವಿಮರ್ಶೆ ಮಾಡಬಹುದಾಗಿದೆ – 1687 ರಿಂದ 1882 ಕಾಲ ಘಟ್ಟ; 1882 ರಿಂದ 1919 ಕಾಲ ಘಟ್ಟ; 1919 ರಿಂದ 1947 ಕಾಲ ಘಟ್ಟಗಳನ್ನಾಗಿ ಮಾಡಲಾಗಿದೆ.

### 1687 ರಿಂದ 1882 ಕಾಲ ಘಟ್ಟ

ಈ ಕಾಲ ಘಟ್ಟದಲ್ಲಿ ಮದರಾಸ್ ಕಾರ್ಪೋರೇಶನ್ ಅಸ್ತಿತ್ವಕ್ಕೆ ಬಂತು. ಇದು ಶಾಲೆ, ಸ್ವಚ್ಛತೆ, ಕಾರಗೃಹ, ಬೀದಿ ದೀಪಗಳ ಬಗ್ಗೆ ಹೆಚ್ಚಿನ ಮಹತ್ತ್ವ ಪಡೆದುಕೊಂಡು ಕಾರ್ಯ ನಿರ್ವಹಿಸುತ್ತಿದ್ದವು.

### 1882–1919ರ ಕಾಲ ಘಟ್ಟ

ಈ ಕಾಲಘಟ್ಟದಲ್ಲಿ ಭಾರತದ ಸ್ಥಳೀಯ ಸಂಸ್ಥೆಗಳ ಸ್ಥಾಪಕ ಲಾರ್ಡ್ ಲಿಪ್‌ಸನ್ ಕೆಲವು ಅನುಷ್ಠಾನವನ್ನು ಮಾಡಿದ್ದಾರೆ. ಅವುಗಳೆಂದರೆ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ನಡುವೆ ಸಂಪರ್ಕ ಸೇತುವೆಯ ನಿರ್ಮಾಣ, ಸರಕಾರೇತರ ಅಧಿಕಾರಿ ವರ್ಗಗಳ ಆಯ್ಕೆಯು ಚುನಾವಣೆಯ ಮುಖಾಂತರ ನಡೆಯಬೇಕು. ಅದೇ ರೀತಿಯಲ್ಲಿ ಸ್ಥಳೀಯ ಸಂಸ್ತೆಗಳ ಪ್ರಮುಖ ಧ್ಯೇಯವು ರಾಜಕೀಯ ಶಿಕ್ಷಣವನ್ನು ಜನರಿಗೆ ಒದಗಿಸಿ, ಆಡಳಿತ ಕಾರ್ಯವನ್ನು ನಿರ್ವಹಿಸಬಹುದು ಎಂದು ತಿಳಿಯಬಹುದು.

## 1919–1947ರ ಕಾಲ ಘಟ್ಟ:

ಈ ಸಮಯದಲ್ಲಿ ಆಟೋಕ್ರಾಸಿ (ಏಕಚಕ್ರಾಧಿಪತಿ) ಯಿಂದಾಗಿ ಸಂಸ್ಥೆಗಳು ದುರ್ಬಲಗೊಂಡು ಕಾರ್ಯನಿರ್ವಹಿಸಿತು. ಅದೇ ರೀತಿಯಲ್ಲಿ ಕಾರ್ಯವು ವರ್ಗವಣೆಯ ರೀತಿಯಲ್ಲಿ ಇದ್ದವು.

## ಸ್ವಾತಂತ್ರ್ಯ ನಂತರದ ಘಟ್ಟ

ಸ್ವಾತಂತ್ರ್ಯದ ನಂತರವು ಕೂಡ ಸ್ಥಳೀಯ ಸಂಸ್ಥೆಗಳು ತನ್ನದೇ ಆದ ರೀತಿಯಲ್ಲಿ ಛಾಯೆಯನ್ನು ಮೂಡಿಸಿ, ಸತತ 4 ದಶಕಗಳ ಕಾಲ ಆಡಳಿತವನ್ನು ನಡೆಸಿ ಹಣಕಾಸಿನ ವಿಷಯದಲ್ಲಿ ನಿರ್ಲಕ್ಷತೆಯನ್ನು ತೋರಿಸಿತು. ಸ್ಥಳೀಯ ಸಂಸ್ಥೆಗಳು ಸ್ಥಳೀಯವಾಗಿ ಆಡಳಿತವನ್ನು ಸಣ್ಣ ಪ್ರದೇಶವನ್ನು ಒಳಗೊಂಡು ಹಳ್ಳಿ, ನಗರದಲ್ಲಿ ನಡೆಯುತ್ತದೆ. ಭಾರತದಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಎರಡು ವಿಧದಲ್ಲಿ ವಿಂಗಡಿಸಿದ್ದಾರೆ. ಸ್ಥಳೀಯ ಸಂಸ್ಥೆಗಳು ಸ್ಥಳೀಯ ಯೋಜನೆಗಳು, ಅಭಿವೃದ್ಧಿ ಮತ್ತು ಆಡಳಿತವನ್ನು ಒಳಗೊಂಡು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಹರಡಿಗೊಂಡಿದೆ. ಅದನ್ನು ವಿಕೇಂದ್ರಿಕೃತ ಆಡಳಿತವನ್ನು ಹೆಚ್ಚಿಸಿ ಪ್ರಾಮುಖ್ಯತೆಯನ್ನು ಅವಲೋಕನ ಮಾಡುವಾಗ ಸಂವಿಧಾನದ 73ನೇ ಮತ್ತು 74ನೇ ತಿದ್ದುಪಡಿಯ ನಂತರ ಪರಾಮರ್ಶನೆ ಮಾಡಬಹುದು.

## ಗ್ರಾಮೀಣ ಸ್ಥಳೀಯ ಸಂಸ್ಥೆ

**"ಪಂಚಾಯತ್ ರಾಜ್"** ಎಂಬ ಪರಿಕಲ್ಪನೆಯು ಬ್ರಿಟೀಷರ ಅನುಗುಣವಾಗಿ ಬಂತು ಎಂದು ಹೇಳಬಹುದಾಗಿದೆ. ಇಲ್ಲಿ ನಾವು 'ರಾಜ್'[4] ಎಂದರೆ ಸರಕಾರ ಅಥವಾ ಆಡಳಿತ ಎಂದು ವ್ಯಾಖ್ಯಾನಿಸಬಹುದಾಗಿದೆ. ಮಹಾತ್ಮ ಗಾಂಧಿಜಿಯವರು ವಿಕೇಂದ್ರಿಕೃತದ ಬಗ್ಗೆ ಹೇಳಿ, ಯಾವುದೇ ಗ್ರಾಮವು ಅದರ ಏಳಿಗೆಗೆ ಅದೇ ಹೊಣೆಯಾಗಿರುತ್ತದೆ ಎಂದು ಪ್ರತಿಪಾದಿಸಿದ್ದಾರೆ. ಅವರ "ಗ್ರಾಮ ಸ್ವರಾಜ" (Grama Swaraj) ದ ಬಗ್ಗೆ ಹೆಚ್ಚಿನ ಪ್ರಾಮುಖ್ಯತೆ ದೊರೆತ ರೀತಿಯಲ್ಲಿದೆ. ಇದು 1950ರ ಮತ್ತು 1980ರ ದಶಕದಲ್ಲಿ ಪಂಚಾಯತ್ ವ್ಯವಸ್ಥೆಯನ್ನು ವಿವಿಧ ರಾಜ್ಯದಲ್ಲಿಯೂ ಜಾರಿಗೊಳಿಸಿರುತ್ತದೆ. ಭಾರತದ ಸಂವಿಧಾನದ 7ನೇ ತಖ್ತೆನಲ್ಲಿ ಅನುಷ್ಠಾನ ಮಾಡಿದ್ದ ಸ್ವಾತಂತ್ರ್ಯದ ನಂತರ 1952ರಲ್ಲಿ ಸಮೂಹ ಅಭಿವೃದ್ಧಿ ಕಾರ್ಯವನ್ನು ಹುಟ್ಟುಹಾಕಿದ್ದಾರೆ. ಆದರೆ ಇದು ಜನರನ್ನು ತಲುಪದ ಕಾರಣ ಅಭಿವೃದ್ಧಿ ಮಟ್ಟವನ್ನು ಕಾಣಲಿಲ್ಲ. ಆದರೆ ಬಲವಂತರಾಯ್ ಮೆಹ್ತಾ ಅದರ ಹಿಂದುಳಿವಿಕೆಗೆ ಕಾರಣವನ್ನು ಹುಡುಕಿದಾರೆಂಬುವನ್ನು ತಿಳಿಯಬಹುದು. ಅವರು ಈ ಒಂದು ರೀತಿಯ ತಪ್ಪಿಗೆ ಗ್ರಾಮಗಳ ಮಟ್ಟದಿಂದಲೇ ನಿಜವಾದ ಫಲನುಭವಿಗಳಿಗೆ ಕಾರ್ಯಕ್ರಮಗಳಿಂದ ಸದುಪಯೋಗವನ್ನು ಪಡೆಯಬಹುದು ಎಂಬುದನ್ನು ತಿಳಿಯಬಹುದು. ಈ ಸ್ಥಳೀಯ ಸಂಸ್ಥೆಯು ಗ್ರಾಮದ ಜನರ ಪ್ರತಿನಿಧಿಯಾಗಿ ಕಾರ್ಯವನ್ನು ನಿರ್ವಹಿಸಿ ಅಭಿವೃದ್ಧಿಯನ್ನು ಕಂಡುಕೊಳ್ಳುತ್ತದೆ. ಅದೇ ರೀತಿಯಲ್ಲಿ 1977 ಅಶೋಕ ಮೆಹ್ತಾ (Ashok Mehta) ಕೂಡ ಈ ಪಂಚಾಯತ್‌ಗಳ ಅಭಿವೃದ್ಧಿಗೋಸ್ಕರ ಇದ್ದ ಕಾರ್ಯಕ್ರಮಗಳಿಗೆ ವಿಮರ್ಶೆ ಮಾಡಿದ್ದಾರೆ. ಅದೇ ರೀತಿಯಲ್ಲಿ ಅಶೋಕ್ ಮೆಹ್ತಾರವರ ಪಂಚಾಯತ್ ಕಮಿಟಿಯು ಸಂವಿಧಾನಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ತಿಳಿದು ಸಶಕ್ತಿಯನ್ನು ಹೊಂದಿರುವಂತಾಗುತ್ತದೆ ಎಂಬುದನ್ನು ತಿಳಿಯಬಹುದೆ. ಅದೇ ರೀತಿಯಲ್ಲಿ ಬಲವಂತ ಮೆಹ್ತಾರವರು ಸ್ಥಳೀಯ ಸಂಸ್ಥೆಗಳ ಆಡಳಿತವನ್ನು ಪಂಚಾಯತ್ ಮುಖಾಂತರ ನಡೆಸಿಕೊಟ್ಟರು. ಆದುದರಿಂದ ಪಂಚಾಯತ್ ರಾಜ್‌ನ್ನು

ಸಂವಿಧಾನದ ಉಸಿರು ಎಂದು ಹೇಳಬಹುದು. ಆದುದರಿಂದ ಪಂಚಾಯತ್ 1977ರ ನಂತರ ಉದಯವಾಗಿ, ಅದಕ್ಕೆ ನಾವು 2ನೇ ತಲೇಮಾರು ಪಂಚಾಯತ್ ಎಂದು ಹೇಳಬಹುದು. ಆದುದರಿಂದ ಪಶ್ಚಿಮ ಬಂಗಾಲದಲ್ಲಿ ಪಂಚಾಯತ್ ಬಹಳ ಪ್ರಬಲವಾಗಿ ಮೂಡಿಬಂತು.

1990ರ ದಶಕದಲ್ಲಿ, ಸಂವಿಧಾನದ ಶಕ್ತಿ ಇಲ್ಲದೆ, ಯಾವುದೇ ಸ್ಥಳೀಯ ಸಂಸ್ಥೆಗಳ ಕಾರ್ಯ ಸಫಲವಾಗುವುದಿಲ್ಲ. ಆದುದರಿಂದ 1993ರಲ್ಲಿ ಸಂವಿಧಾನಕ್ಕೆ 73ನೇ ತಿದ್ದುಪಡಿ ತಂದ ನಂತರ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ಮಹತ್ತ್ವ ದೊರೆತಿದೆ.

ಭಾರತದ ಕೆಲವು ಮಹಾನಗರಗಳ ವಿಶ್ಲೇಷಣೆಯನ್ನು ಈ ರೀತಿಯಲ್ಲಿ ವಿಶ್ಲೇಷಣೆ ನಡೆಸಬಹುದು. ಭಾರತದ ಮಹಾನಗರಗಳ ಮುನಿಸ್ಸಿಪಾಲ್ ಕಾರ್ಪೋರೇಶನದು ಆದಾಯವನ್ನು ಕೋಷ್ಟಕ 2.1ರಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಕೋಷ್ಟಕ –2.1: ಭಾರತದ ಮಹಾನಗರಗಳ ಮುನಿಸ್ಸಿಪಾಲ್ ಕಾರ್ಪೋರೇಶನದು ಆದಾಯ**

| ನಗರ | ಒಟ್ಟು ಆದಾಯ (2001) ಮಿಲಿಯ | ಒಟ್ಟು ಆದಾಯ (2011) ಮಿಲಿಯ | ಶೇಕಡವಾರು ಹೆಚ್ಚಳ 2001–2011 |
|---|---|---|---|
| ಹೈದರಬಾದ್ | 2571.39 | 10459.82 | 24.58 |
| ದಿಲ್ಲಿ | 13728.45 | 31659.68 | 43.36 |
| ನವದಿಲ್ಲಿ | 7495.14 | 15668.03 | 47.83 |
| ಚೆನ್ನೈ | 3563.74 | 10237.67 | 34.81 |
| ಥಾಣೆ | 2658.39 | 7680.77 | 34.61 |
| ಬೆಂಗಳೂರು | 5471.52 | 35172.00 | 15.55 |

ಮೂಲ: *ಭಾರತದ ಆರ್ಥಿಕ ಸಮೀಕ್ಷೆ 2011 ವರದಿ.*

ಕೋಷ್ಟಕ 2.1 ಮುಖಾಂತರ ನಾವು ದೇಶದಲ್ಲಿ ಬೇರೆ ಬೇರೆ ಅಭಿವೃದ್ಧಿ ಹೊಂದಿರುವಂತಹ ಕಾರ್ಪೋರೇಶನ್ ಆದಾಯದಲ್ಲಿ ವ್ಯತ್ಯಾಸವನ್ನು ಕಾಣುತ್ತೇವೆ. ಭಾರತದ ಮುನಿಸ್ಸಿಪಾಲ್ ಕಾರ್ಪೋರೇಶನ್ ಮಹಾನಗರದಲ್ಲಿ ಖರ್ಚು–ವೆಚ್ಚವನ್ನು ವಿಶ್ಲೇಷಣೆ ಮಾಡಬಹುದು. ಇದನ್ನು ಕೋಷ್ಟಕ 2.2ರಲ್ಲಿ ಗಮನಿಸಬಹುದು.

ಕೋಷ್ಟಕ-2.2: ಭಾರತದ ಮುನಿಸ್ಸಿಪಾಲ್ ಕಾರ್ಪೋರೇಶನ್ ಮಹಾನಗರದಲ್ಲಿ ಖರ್ಚು-ವೆಚ್ಚ.

| ರಾಜ್ಯ | 2001ರ ಖರ್ಚು-ವೆಚ್ಚ (ಮಿಲಿಯ) | 2011ರ ಖರ್ಚು-ವೆಚ್ಚ (ಮಿಲಿಯ) | ಶೇಕಾಡುವಾರು ಹೆಚ್ಚಳ |
|---|---|---|---|
| ಹೈದರ್‌ಬಾದ್ | 1955.18 | 8505.65 | 22.98 |
| ದಿಲ್ಲಿ | 13728.02 | 36414.31 | 37.69 |
| ನವದಿಲ್ಲಿ | 7472.29 | 17524.04 | 46.64 |
| ಚೆನ್ನೈ | 6176.48 | 9416.89 | 65.58 |
| ಥಾಣೆ | 2464.69 | 7817.52 | 31.52 |
| ಬೆಂಗಳೂರು | 1181.99 | 35325.52 | 3.34 |

*ಮೂಲ: ಭಾರತದ ಆರ್ಥಿಕ ಸಮೀಕ್ಷೆ 2011 ವರದಿ*

ವಿಕೇಂದ್ರಿಕರಣದಿಂದ ದೇಶದ ಉತ್ಪಾದನೆ (Gross Domestic Product)ಯ ಮೇಲೆ ಪ್ರಭಾವ ಬೀರಿರುವುದನ್ನು ಗಣನೆಗೆ ತೆಗೆದುಕೊಂಡು ಅಭಿವೃದ್ಧಿ ಹೊಂದುತ್ತಿರುವ ದೇಶದ ಮಾಪನ ಮಾಡಬಹುದಾಗಿದೆ. ಇದಕ್ಕೆ ಪೂರಕವಾಗಿ ನೈಸರ್ಗಿಕವಾಗಿ ದೊರೆಯುವಂತಹ ಸಂಪನ್ಮೂಲಗಳನ್ನು (Resource) ಉಪಯೋಗಿಸಿಕೊಂಡು ಹೆಚ್ಚಿನ ಆದಾಯಗಳಿಸಿ ದೇಶವನ್ನು ಅಭಿವೃದ್ಧಿ ಪಥದತ್ತ ಮುನ್ನಡೆಸುವುದು ಇದರ ಧ್ಯೇಯವಾಗಿದೆ. ಅದೇ ರೀತಿಯಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಪಾಲುಗೊಳ್ಳುವುವಿಕೆಯಿಂದ ನಿರ್ಣಯ ಮಾಡುವುದು, ಸ್ವಯಂಪೂರ್ಣ ಕಾರ್ಯಕಾರಿಯ ಬೆಳವಣಿಗೆಯು, ಕೆಳಸ್ತರದಿಂದ ಅಭಿವೃದ್ಧಿಯನ್ನು ತರಬಹುದು.

## ಪಾಲುಗೊಳ್ಳುವಿಕೆ ಮತ್ತು ವಿಕೇಂದ್ರಿಕೃತ ಆಡಳಿತ

ವಿಕೇಂದ್ರಿಕೃತ ಆಡಳಿತದಿಂದ ಜನರಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ನಿರ್ಣಯ ಮಾಡಿ ಪಾಲುಗೊಳ್ಳುವುದರಿಂದ ಸ್ಥಳೀಯ ಅಭಿವೃದ್ಧಿಯು ಕೈಗೊಂಡಂತೆ ಇರುತ್ತದೆ. ಆದುದರಿಂದ ಜನರ ಪಾಲುಗೊಳ್ಳುವಿಕೆಯಿಂದ ಹಲವು ರೀತಿಯ ಯೋಜನೆಗಳಿಗೆ ಆಸ್ಪುನೀಡುವ ಪರಿಯಿಂದ ಸ್ಥಳೀಯ ತೊಂದರೆಗಳಿಗೆ ಸ್ಥಳೀಯ ಸಂಸ್ಥೆಗಳಿಂದ ಪರಿಹಾರ ದೊರೆಯುವುದನ್ನು ವಿಶ್ಲೇಷಣೆ ಮಾಡಬಹುದು. ಯಾವಾಗಲೂ ಕೂಡ ಪಾಲುಗೊಳ್ಳುವಿಕೆ ಮತ್ತು ವಿಕೇಂದ್ರಿಕೃತದ ನಡುವೆ ನಾವು ಕೆಲವು ರೀತಿಯ ತಾರತಮ್ಯವನ್ನು ಕಂಡುಕೊಳ್ಳಬಹುದು. ನಮ್ಮ ಪರಿಸರದಲ್ಲಿ ನಾವು ಸಾಂಪ್ರದಾಯಿಕ ರೀತಿಯಲ್ಲಿಯೂ ತಾರತಮ್ಯವನ್ನು ವಿಮರ್ಶಿಸಬಹುದು. ಏಕೆಂದರೆ ಇದು ಸರಕಾರ ಪ್ರಜೆಗಳ ನಡುವೆ ಸಂಬಂಧವನ್ನು ಕಲ್ಪಿಸುವುದನ್ನು ನೋಡಬಹುದಾಗಿದೆ. ವಿಕೇಂದ್ರಿಕರಣದಿಂದ ಜನರಿಗೆ ದೊರಕುವ ಅವಕಾಶ ಮತ್ತು ಮಿತಿಗಳನ್ನು ಗಣನೆಗೆ ತೆಗೆದುಕೊಂಡು ಸ್ಥಳೀಯ ಸಂಸ್ಥೆಗಳ ಉಲ್ಲೇಖಿಸ ಮಾಡಬಹುದು. ಕೆಲವು ತಜ್ಞರ ಪ್ರಕಾರ ಪಾಲುಗೊಳ್ಳುವಿಕೆಯಿಂದ ಸ್ಥಳೀಯ ಸಂಸ್ಥೆಗಳಿಗೆ ಉತ್ತೇಜನ ನೀಡಿದ ರೀತಿಯಲ್ಲಿ ಬೇಡಿಕೆಗಳು ಜಾಸ್ತಿಯಾಗಿ ಈ ಸ್ಥಳೀಯ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡದ ರೀತಿಯಲ್ಲಿರುವುದನ್ನು ಪರಾಮರ್ಶಿಸಬಹುದು.

ವಿಕೇಂದ್ರಿಕರಣ ಎರಡು ಅಂಶಗಳನ್ನು ಒಳಗೊಂಡಿರುತ್ತದೆ, ಮೊದಲನೆಯದು ಸ್ಥಳೀಯವಾಗಿ ದೊರೆಯುವಂತಹ ಸಂಪನ್ಮೂಲಗಳಿಂದ ಅಭಿವೃದ್ಧಿಯೂ ತಂತ್ರಜ್ಞಾನದ ಮತ್ತು ಮಾನವ ಅಭಿವೃದ್ಧಿಗೆ ಬುನಾದಿಯಾಗಿದೆ. ಈ ರೀತಿಯಲ್ಲಿ ಯಾವುದೇ ತರಹದ ಸಾಮಾಜಿಕ ಸೇವೆಯು ಆದಾಯವನ್ನು ಗಳಿಸುವ ವಿಧಾನದ ಮೂಲಕ ಅಭಿವೃದ್ಧಿ ಹೊಂದುತ್ತದೆ.

## ಕರ್ನಾಟಕದಲ್ಲಿ ಸ್ಥಳೀಯ ಸಂಸ್ಥೆ ಆಡಳಿತ

ಪ್ರಜಾಪ್ರಭುತ್ವ ಮಾದರಿ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರ ವಿಕೇಂದ್ರಿಕರಣ ಹಾಗೂ ದಕ್ಷತೆ ಹೆಚ್ಚು ಅರ್ಥಪೂರ್ಣ ಹಾಗೂ ಅನಿವಾರ್ಯ ಘಟಕಗಳೆನಿಸಿದ್ದು, ಈ ರೀತಿಯಲ್ಲಿ 'ಕರ್ನಾಟಕ ಪಂಚಾಯತ್‌ರಾಜ್' ಕಾನೂನು ಜಾರಿಗೆ ಕೊಟ್ಟಿರುವ ಕರ್ನಾಟಕವು ದೇಶದಲ್ಲಿಯೇ ಪ್ರಥಮ ರಾಜ್ಯವೆಂಬ ಹಿರಿಮೆಗೆ ಪಾತ್ರವಾಗಿದೆ. ರಾಜ್ಯ ಅಥವಾ ಕೇಂದ್ರಿಕೃತ ಸರ್ಕಾರದ ಆಡಳಿತದ ಲಾಭವು ಗ್ರಾಮೀಣವಾಸಿಗಳಿಗೆ ತಲುಪಬೇಕಾದರೆ ಅಧಿಕಾರ ವಿಕೇಂದ್ರಿಕರಣದಿಂದ ಮಾತ್ರ ಸಾಧ್ಯವಾಗುತ್ತದೆ. ಗ್ರಾಮೀಣ ಜನತೆ ತಮ್ಮ ಕುಂದುಕೊರತೆ ಹಾಗೂ ಬೇಕು ಬೇಡಗಳನ್ನು ಬಗೆಹರಿಸಿಕೊಳ್ಳಲು ಸರ್ಕಾರದ ಆಡಳಿತ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವುದು ಮುಖ್ಯವಾಗಿರುತ್ತದೆ.

ಒಂದು ಪ್ರದೇಶದ ನಾಗರಿಕರು ತಮಗೆ ಅತ್ಯವಶ್ಯವಾದ ಮೂಲಭೂತ ನಾಗರಿಕ ಸೌಲಭ್ಯಗಳನ್ನು ಪಡೆಯುವುದರ ಜೊತೆಗೆ ತಮ್ಮನ್ನು ಈ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಅನಾದಿಕಾಲದಿಂದಲೂ ಮಾಡಿದ ಸಂಘರ್ಷವೇ ಸ್ಥಳೀಯ ಸ್ವಯಂಮಾಡಳಿತ ಸಂಸ್ಥೆಗಳ ಉದಯಕ್ಕೆ ಕಾರಣವೆಂದು ಹೇಳಬಹುದು. ಭಾರತದಲ್ಲಿ ಸ್ಥಳೀಯ ಸ್ವಯಂಮಾಡಳಿತವು ಸುದೀರ್ಘ ಪರಂಪರೆ ಹೊಂದಿದೆ. ಹರಪ್ಪ ಮಹಂಜೋದಾರೋ ಕಾಲದಿಂದಲೂ ವ್ಯವಸ್ಥಿತ ಪೌರಾಡಳಿತವಿದ್ದ ಬಗೆಗೆ ಮಾಹಿತಿ ಲಭ್ಯವಿದೆ. ವೇದ ಕಾಲದಿಂದಲೂ ಒಂದು ಸೀಮಿತ ಭೌಗೋಳಿಕ ಪ್ರದೇಶದ ಪುಟ್ಟ ಗ್ರಾಮವು ಒಂದು ಚಿಕ್ಕ ಗಣರಾಜ್ಯದಂತೆ ಕಾರ್ಯನಿರ್ವಹಿಸುತ್ತಿದ್ದ ಬಗ್ಗೆ ಮತ್ತು ಇಂಥ ಪಾರಂಪರಿಕ, ರೂಢಿಗತ ಆಡಳಿತ ವ್ಯವಸ್ಥೆಯನ್ನು ಅಂದಿನ ರಾಜ ಮಹಾರಾಜರು ಮಾನ್ಯ ಮಾಡಿದ್ದರಲ್ಲದೆ ಅದರ ಹಕ್ಕು ಬಾಧ್ಯತೆಗಳನ್ನೆ ಗೌರವಿಸುತ್ತಿದ್ದ ಬಗ್ಗೆ ದಾಖಲೆಗಳಿವೆ.[1] ಹೀಗೆ ಬೀಜಾಂಕುರಗೊಂಡ ಪಂಚಾಯತ್ ರಾಜ್ ವ್ಯವಸ್ಥೆ ಇಂದು ನಿನ್ನೆಯದಾಗಿರದೆ 4000 ವರ್ಷಗಳ ಸುದೀರ್ಘ ಇತಿಹಾಸ ಹೊಂದಿದೆ.[2]

ಪ್ರತಿಯೊಂದು ಗ್ರಾಮಗಳಲ್ಲಿ ಗ್ರಾಮಸಭೆಗಳು ಇದ್ದು, ವಿಜಯನಗರ ಅರಸರ ಕಾಲದವರೆಗೂ ಅವು ಪ್ರಮುಖ ಆಡಳಿತ ಘಟಕಗಳೆನಿಸಿ ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದುವಲ್ಲದೆ ಮುಂದೆಯೂ ಸಹ ಮುಸ್ಲಿಂ ಆಡಳಿತದವರೆಗೂ ಮುಂದುವರೆದವು. ಜಮೀನ್ದಾರಿ ಪದ್ಧತಿ ಪ್ರಚಲಿತಕ್ಕೆ ಬಂದಾಗ ಗ್ರಾಮ ಪಂಚಾಯಿತಿಗಳು ಜಮೀನ್ದಾರರ ಪ್ರಭಾವಕ್ಕೆ ಸಿಲುಕಿ ತಮ್ಮ ಅಸ್ತಿತ್ವ ಕಳೆದುಕೊಳ್ಳುವ ಹಂತಕ್ಕೆ ಬಂದವು. ನಂತರದ ಬ್ರಿಟೀಷ್ ಆಡಳಿತ ಅವಧಿಯಲ್ಲಿ ಅಂದರೆ, 1870ರಲ್ಲಿ ಲಾರ್ಡ್ ಮೇಯೋ ಹಾಗೂ 1882ರಲ್ಲಿ ಲಾರ್ಡ್ ರಿಪ್ಪನ್‌ರು ಸ್ವಯಂಮಾಡಳಿತ ಸಂಸ್ಥೆಗಳಿಗೆ ಪುನರುಜ್ಜೀವಕೊಟ್ಟರು. ಇಂದು ರೂಢಿಯಲ್ಲಿರುವ ಆಧುನಿಕ ಪಂಚಾಯತ್ ರಾಜ್ ಪರಿಕಲ್ಪನೆಯು ಮೇಯೊ ಕಾಲದಲ್ಲಿ ರೂಪಗೊಂಡಿತ್ತು. ಲಾರ್ಡ್ ರಿಪ್ಪನ್ ಮೊದಲಬಾರಿಗೆ ಇವುಗಳಿಗೆ ಶಾಸನಬದ್ಧ ಸಂಸ್ಥೆಗಳ ರೂಪ ನೀಡಿದರು. ಅವನ ಕಾಲದಲ್ಲಿಯೇ ಶಾಸನಬದ್ಧವಾದ ಜಿಲ್ಲಾ ಬೋರ್ಡುಗಳು ಜಾರಿಗೆ ಬಂದವು.

ರಾಜ್ಯಗಳ ಪುನರ್ ವಿಂಗಡನೆಯ ನಂತರ, ಸ್ಥಳೀಯ ಸ್ವಯಂಮಾಡಳಿತ ಸಂಸ್ಥೆಗಳಿಗೆ ಹೆಚ್ಚು ಪರಿಣಾಮಕಾರಿ ಯಾವ ಏಕರೂಪದ ಕಾನೂನಿನ ಆವಶ್ಯಕತೆ ಇರುವುದನ್ನು ಕಂಡುಕೊಂಡು ಸರಕಾರವು ಗ್ರಾಮೀಣ ಅಭಿವೃದ್ಧಿ ಕಾರ್ಯಗಳನ್ನು ಜನರ ಸಹಭಾಗಿತ್ವದಿಂದ ಕೈಗೊಳ್ಳಬೇಕಾಯಿತು. ಹೀಗಾಗಿ 1957ರ ಬಲವಂತರಾಯ್ ಮೆಹ್ತಾ ಸಮಿತಿಯ ವರದಿಯನ್ನು ಅನುಸರಿಸಿ ದೇಶದ ಇತರೆಡೆಗಳಂತೆ ಕರ್ನಾಟಕದಲ್ಲಿಯೂ ಸರ್ಕಾರವು ಕರ್ನಾಟಕ ಗ್ರಾಮ ಪಂಚಾಯತ್ ಮತ್ತು ಸ್ಥಳೀಯ ಮಂಡಳಿಗಳ ಕಾಯ್ದೆ (1959)ರನ್ನು 1950ನವೆಂಬರ್ ಒಂದರಲ್ಲಿ ಜಾರಿಗೆ ಬಂದಿದೆ. ಈ ಕಾಯಿದೆ ಹಿಂದಿನ ಎಲ್ಲ ಕಾಯಿದೆಗಳ ಬದಲಿಗೆ ಇದ್ದು, ಇದು ಹೆಚ್ಚು ವ್ಯಾಪಕಗೊಂಡು ಮೂರು ಹಂತದ ಪಂಚಯತ್ ರಾಜ್ ವ್ಯವಸ್ಥೆಯನ್ನು ಒಳಗೊಂಡಿದೆ. ರಾಜ್ಯ ಪುನರ್ ವಿಂಗಡನೆಗೂ ಪೂರ್ವದಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿದ್ದ ವಿವಿಧ ಕಾಯ್ದೆಗಳನ್ನು ರದ್ದುಪಡಿಸಿ ಗ್ರಾಮ ಪಂಚಾಯತ್ ತಾಲೂಕು ಅಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾ ಅಭಿವೃದ್ಧಿ ಸಮಿತಿ ಎಂಬ ಮೂರು ಹಂತದ ಈ ಹೊಸ ಕಾಯ್ದೆ ಕರ್ನಾಟಕದಾದ್ಯಂತ ಜಾರಿಗೆ ಬಂದಿತು. ಇದುವೇ ಗ್ರಾಮ ಸ್ವರಾಜ್ಯ ಅಧಿನಿಯಮ. ಇದಕ್ಕೆ ಮುಂದೆ 1961, 1964, 1965, 1970 ಇಸವಿಯಲ್ಲಿ ನಿಯಮಗಳನ್ನು ತಂದು ತಿದ್ದುಪಡಿ ಮಾಡಲಾಗಿದೆ.

## ಕರ್ನಾಟಕದಲ್ಲಿ ಜಿಲ್ಲಾ ಅಭಿವೃದ್ಧಿ ಸಮಿತಿ

ಹಳೆಯ ಜಿಲ್ಲಾ ಮಂಡಳಿಗಳನ್ನು ರದ್ದುಪಡಿಸಿ ಹೊಸ ಕಾಯ್ದೆಯಾದ ಕರ್ನಾಟಕ ಗ್ರಾಮ ಪಂಚಾಯತಗಳ ಮತ್ತು ಸ್ಥಳೀಯ ಮಂಡಳಿಗಳ ಕಾಯ್ದೆ 1959ರ ಪ್ರಕಾರ 1960ರಲ್ಲಿ ಜಿಲ್ಲಾ ಅಭಿವೃದ್ಧಿ ಸಮಿತಿಗಳನ್ನು ರಚಿಸಲಾಯಿತು. ಕರ್ನಾಟಕದಲ್ಲಿ ಇಂಥ 19 ಸಮಿತಿಗಳ ರಚನೆಯಾಯಿತು. ಅಭಿವೃದ್ಧಿ ಸಮಿತಿಗಳ ಕಾರ್ಯವೇನೆಂದರೆ, ತಮ್ಮ ಅಧೀನದಲ್ಲಿ ಕೆಲಸ ಮಾಡುತ್ತಿರುವ ಸ್ಥಳೀಯ ಸಂಸ್ಥೆಗಳಾದ ತಾಲೂಕು ಅಭಿವೃದ್ಧಿ ಮಂಡಳಿ ಮತ್ತು ಗ್ರಾಮ ಪಂಚಾಯತ್‌ಗಳ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ನೀಡುವುದು. ಜಿಲ್ಲಾ ಅಭಿವೃದ್ಧಿ ಸಮಿತಿಗೆ ಜಿಲ್ಲೆಯ ಜಿಲ್ಲಾಧಿಕಾರಿಯು ಪದನಿಮಿತ್ತ ಆಯೋಜನೆಗೊಂಡಿರುತ್ತಾರೆ. ಜಿಲ್ಲಾ ಅಭಿವೃದ್ಧಿ ಸಹಾಯಕರು ಅದರ ಕಾರ್ಯದರ್ಶಿಗಳಾಗಿರುತ್ತಾರೆ. ಜಿಲ್ಲೆಯನ್ನು ಪ್ರತಿನಿಧಿಸುವ ಲೋಕಸಭೆ, ರಾಜ್ಯಸಭೆ, ಮತ್ತು ಶಾಸನಸಭೆಗಳಾದ, ವಿಧಾನಸಭೆ ಹಾಗೂ ವಿಧಾನ ಪರಿಷತ್ ಸದಸ್ಯರು, ಜಿಲ್ಲೆಯಲ್ಲಿ ಕೆಲಸ ಮಾಡುತ್ತಿರುವ ಅಭಿವೃದ್ಧಿ ಇಲಾಖೆಗಳ ಅಧಿಕಾರಿಗಳು, ಪರಿಶಿಷ್ಟ ಜಾತಿ ಪಂಗಡದ ನಾಮಕರಣಗೊಂಡು ಸದಸ್ಯರು ಮತ್ತು ಮಹಿಳಾ ಸದಸ್ಯ ಇರುತ್ತಾರೆ. ಇದನ್ನು ಅಧಿಕಾರಿಗಳಿಂದ ಕೂಡಿರುವ ಸಲಹಾ ಮಂಡಳಿ ಎನ್ನಬಹುದಾಗಿದೆ.

## ಕರ್ನಾಟಕದಲ್ಲಿ ತಾಲೂಕು ಅಭಿವೃದ್ಧಿ ಮಂಡಳಿ

ಕರ್ನಾಟಕ ಗಾಮ ಪಂಚಾಯತಿಗಳ ಹಾಗೂ ಸ್ಥಳೀಯ ಮಂಡಳಿಯ ಅಧಿನಿಯಮ 1959ರ ಪ್ರಕಾರ 1960ರಲ್ಲಿ ಪ್ರತಿಕಂದಾಯ ತಾಲೂಕಿಗೆ ಒಂದರಂತೆ ತಾಲೂಕು ಅಭಿವೃದ್ಧಿ ಮಂಡಳಿಗಳು ರಚನೆಗೊಂಡವು. ತಾಲೂಕಿಗೆ ಸೇರಿರುವ ಮುನಿಸಿಪಾಲಿಟಿಯ ಪ್ರದೇಶ, ನೈರ್ಮಲ್ಯ ಮಂಡಳಿ ಇಲ್ಲವೆ ಅಧಿಸೂಚಿತ ಪ್ರದೇಶಗಳನ್ನು ಹೊರತುಪಡಿಸಿ ಇಡೀ ತಾಲೂಕು ಪ್ರದೇಶವನ್ನು ಈ ತಾಲೂಕು ಅಭಿವೃದ್ಧಿ ಮಂಡಳಿ ಹೊಂದಿರುತ್ತದೆ. ತಾಲೂಕಿನ ಜನಸಂಖ್ಯೆ ಒಂದು ಲಕ್ಷಕ್ಕಿಂತ ಕಡಿಮೆ ಇದ್ದರೆ 15 ಜನ ಸದಸ್ಯರು, ಒಂದು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆ ಇದ್ದರೆ 15 ಸದಸ್ಯರು ಮತ್ತು ಸಾಮಾನ್ಯವಾಗಿ ಆ ತಾಲೂಕಿನಲ್ಲಿ ವಾಸಿಸುವ ವಿಧಾನ ಪರಿಷತ್‌ನ ಸದಸ್ಯರು ತಾಲೂಕು ಅಭಿವೃದ್ಧಿ ಮಂಡಳಿಯ ಸಭೆಗಳಲ್ಲಿ ಭಾಗವಹಿಸಿ

ಮತ ಚಲಾಯಿಸಬಹುದಾಗಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಅವರ ಜನಸಂಖ್ಯೆ ಆಧರಿಸಿ ಮೀಸಲಾತಿ ಒದಗಿಸುವುದು ಮತ್ತು ಸ್ತ್ರೀಯರಿಗೆ ಎರಡು ಸ್ಥಾನಗಳು ಮೀರದಂತೆ ಸ್ಥಾನ ಮೀಸಲಾತಿ ಇದೆ. ತಾಲೂಕಿನಿಂದ ಚುನಾಯಿತರಾದ ಶಾಸಕರು ಮಂಡಳಿಯ ಪದನಿಮಿತ್ತ ಸದಸ್ಯರಾಗಿರುತ್ತಿದ್ದರು. ಸದಸ್ಯರು ಅಧಿಕಾರಾವಧಿ ಐದು ವರ್ಷಗಳಾಗಿದೆ. ಮುಖ್ಯ ಸಮಿತಿಯ ಅಧೀನದಲ್ಲಿ ಮೂರು ಚುನಾಯಿತ ಸಮಿತಿಗಳು, ಒಂದು ಸ್ಥಾಯಿಸಮಿತಿ, ಎರಡು ಲೆಕ್ಕ ಪರಿಶೋಧಕ ಸಮಿತಿ ಮತ್ತು ಮೂರು ಸಾರ್ವಜನಿಕ ಆರೋಗ್ಯ ಸಮಿತಿ ಕೆಲಸ ಮಾಡುತ್ತದೆ. ತಿದ್ದುಪಡಿಯ ಮೂಲಕ ಸಾರ್ವಜನಿಕ ನ್ಯಾಯ ಸಮಿತಿಯನ್ನು ರಚಿಸಲು ಅವಕಾಶ ಮಾಡಲಾಗಿದೆ. ಕ್ಷೇತ್ರಾಭಿವೃದ್ಧಿ ಅಧಿಕಾರಿಯು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯಾಗಿರುತ್ತಾರೆ. ತಾಲೂಕು ಅಭಿವೃದ್ಧಿ ಮಂಡಳಿಗೆ ತಮ್ಮ ಅಧೀನದಲ್ಲಿರುವ ಪಂಚಾಯಿತಿಗಳ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ನೀಡುವ ಅಧಿಕಾರವಿದೆ. ಪಂಚಾಯಿತಿಗಳ ಮತ್ತು ತಾಲೂಕು ಅಭಿವೃದ್ಧಿ ಮಂಡಳಿಗಳ ನಡುವೆ ಪರಿಣಾಮಕಾರಿ ಸಮನ್ವಯವಿರಬೇಕೆಂದು ಕಾಯ್ದೆಯಲ್ಲಿ ನಿರೂಪಿಸಲಾಗಿದೆ.

ಈ ಮಂಡಳಿಯು ಕಾರ್ಯಗಳನ್ನು ಕಡ್ಡಾಯ ಮತ್ತು ವಿವೇಚನಾಧೀನವೆಂದು ವಿಂಗಡಿಸಲಾಗಿದೆ. ರಸ್ತೆಗಳು, ಸಾರ್ವಜನಿಕ ಬಾವಿಗಳು, ಪ್ರಾಥಮಿಕ ಶಾಲಾ ಕಟ್ಟಡಗಳು, ಆಸ್ಪತ್ರೆಗಳು ಮಾರುಕಟ್ಟೆಗಳು ಹಾಗೂ ವಿಶ್ರಾಂತಿಗೃಹ ಜಾತಿ/ಪಂಗಡಗಳ ಯೋಗಕ್ಷೇಮ ಸಣ್ಣನೀರಾವರಿ ಕಾರ್ಯಕೈಗೊಳ್ಳುವುದು. ಸಾರ್ವಜನಿಕರಿಗೆ ಸೌಕರ್ಯಗಳನ್ನು ಒದಗಿಸುವುದು ಹಾಗೂ ಸರ್ಕಾರದ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನವಾಗಿದೆ. ಆರ್ಥಿಕ ಸಂಪನ್ಮೂಲ ತಾಲೂಕು ಅಭಿವೃದ್ಧಿ ಮಂಡಳಿ ಎರಡು ವಿಧದ ತೆರಿಗೆಗಳನ್ನು ವಿಧಿಸಿದೆ. ಅವುಗಳೆಂದರೆ ವರ್ಗಾವಣೆಯ ಮೇಲಿನ ತೆರಿಗೆ ಮತ್ತು ಮಾರುಕಟ್ಟೆಗೆ ಮಾರಾಟಕ್ಕೆ ತಂದ ಜಾನುವಾರಗಳ ಮೇಲಿನ ಮಾರಟ ತೆರಿಗೆ ಮಂಡಳಿಯು ಬಹುಮಟ್ಟಿಗೆ ಸರ್ಕಾರದ ಅನುದಾನಗಳನ್ನು ಅವಲಂಬಿಸಿದೆ. ಆಯಾ ಪ್ರದೇಶದ ಭೂ ಕಂದಾಯವನ್ನು ಮಂಡಳಿಗಳಿಗೆ ಮತ್ತು ಪಂಚಾಯತ್‌ಗಳ ನಡುವೆ 60:40 ಪ್ರಮಾಣದಲ್ಲಿ ಹಂಚಲಾಗುವುದನ್ನು ವಿಮರ್ಶಿಸಲಾಗಿದೆ.

## ಕರ್ನಾಟಕದ ಗ್ರಾಮ ಪಂಚಯತ್

ಕರ್ನಾಟಕ ಗ್ರಾಮ ಪಂಚಯತ್ ಹಾಗೂ ಸ್ಥಳೀಯ ಮಂಡಳಿಗಳ ಕಾಯ್ದೆ 1959ರ ಅನ್ವಯ 1500ಕ್ಕಿಂತ ಕಡಿಮೆ ಇಲ್ಲದ ಹಾಗೂ 10,000 ಜನಸಂಖ್ಯೆ ಮೀರಿದ ಕಂದಾಯ ಗ್ರಾಮ ಇಲ್ಲವೆ ಗ್ರಾಮದ ಗುಂಪಿಗೆ ಒಂದು ಗ್ರಾಮ ಪಂಚಯತ್ ಇರಬೇಕಾಗುವುದು. ಈ ಅಧಿನಿಯಮವಂತೆ 5000ಕ್ಕಿಂತ ಕಡಿಮೆ ಇಲ್ಲದ ಜನಸಂಖ್ಯೆ ಹಾಗೂ 10000 ರೂ. ಗಳಿಗಿಂತ ಕಡಿಮೆ ಇಲ್ಲದ ವಾರ್ಷಿಕ ಆದಾಯವಿರುವ ಹಳ್ಳಿಗೆ ಪಟ್ಟಣ ಪಂಚಾಯತ್ ಇರುತ್ತದೆ. ಪ್ರತಿಯೊಂದು ಪಂಚಾಯತ್‌ನಲ್ಲಿಯೂ 11ಕ್ಕೆ ಕಡಿಮೆ ಇಲ್ಲದಂತೆ ಮತ್ತು 19 ಕ್ಕಿಂತ ಹೆಚ್ಚಿಲ್ಲದಷ್ಟು ಸದಸ್ಯರು ಪಂಚಾಯತ್‌ನಲ್ಲಿ ಇರುತ್ತಾರೆ. ಸದಸ್ಯರನ್ನು ಬಹು ಸದಸ್ಯಕ್ಷೇತ್ರಗಳಿಂದ ನೇರವಾಗಿ ಆಯ್ಕೆ ಮಾಡಲಾಗುವುದು. ವಯಸ್ಕ ಮತದಾನದ ಆಧಾರದ ಮೇಲೆ ಪ್ರತಿಯೊಂದು ಕ್ಷೇತ್ರದಿಂದ ಎರಡು ಅಥವಾ ಹೆಚ್ಚು ಸದಸ್ಯರು ಚುನಾಯಿತರಾಗುತ್ತಾರೆ. ಇದು ಐದು ವರ್ಷಗಳ ಕಾಲ ಅಧಿಕಾರ ಹೊಂದಿರುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಅವರ ಜನಸಂಖ್ಯೆ ಅನುಸಾರ ಎರಡು ಸ್ತ್ರೀಯರಿಗೆ ಸ್ಥಳ ಮೀಸಲಾತಿ ಇಡಲಾಗಿದೆ. ಪಂಚಾಯತ್ ಸದಸ್ಯರೊಳಗಿಂದ ಒಬ್ಬ ಅಧ್ಯಕ್ಷ ಹಾಗೂ ಉಪಾಧ್ಯಕ್ಷರನ್ನು ಆಯ್ಕೆ ಮಾಡಲಾಗುತ್ತದೆ. ಪಂಚಾಯತ್ ಕನಿಷ್ಠ ತಿಂಗಳಿಗೊಮ್ಮೆಯಾದರು ಸಭೆ ಸೇರಬೇಕಾಗುತ್ತದೆ. ಇವಲ್ಲದೆ ವಿಶೇಷ ಸಭೆಗಳನ್ನು ನಡೆಸಬೇಕು.

ಪ್ರತಿಯೊಂದು ಪಂಚಾಯತ್ ಚುನಾವಣೆ ಮೂಲಕ ಮೂರು ಸಮಿತಿಗಳನ್ನು ರಚಿಸಬೇಕು. ಅವುಗಳೆಂದರೆ ವ್ಯವಸಾಯ ಸಮಿತಿ, ಆರೋಗ್ಯ ಸಮಿತಿ, ಗ್ರಾಮ ಕೈಗಾರಿಕಾ ಸಮಿತಿ, ಸಾಮಾಜಿಕ ನ್ಯಾಯ ಸಮಿತಿ, ಪರಿಶಿಷ್ಟ ಜಾತಿ ಪಂಗಡಗಳಿಗೆ ಸೇರಿದ ಸದಸ್ಯರು, ಪಂಚಾಯತ್‌ನಲ್ಲಿ ಸ್ತ್ರೀ ಸದಸ್ಯರು ಮತ್ತು ತಹಸೀಲ್ದಾರರು ನಾಮಕರಣ ಮಾಡಿದ ದುರ್ಬಲ ವರ್ಗದ ಮೂವರನ್ನು ಮೀರದ ಪ್ರತಿನಿಧಿಗಳು ಇರುತ್ತಾರೆ. ಪಂಚಾಯತ್ ಅಧ್ಯಕ್ಷರು ಸಮಿತಿಯ ಪದನಿಮಿತ್ತ ಸದಸ್ಯರು ಆಗಿರುತ್ತಾರೆ. 1959ರ ಅಧಿನಿಯಮದ ಪ್ರಕಾರ ಹಲವು ಕಾರ್ಯಗಳನ್ನು ವಿಂಗಡಿಸಿದ್ದಾರೆ. ಅವುಗಳೆಂದರೆ ನೈರ್ಮಲ್ಯ, ಬೀದಿ ದೀಪಗಳು, ರಸ್ತೆಗಳು, ಸಾಂಕ್ರಾಮಿಕಗಳ ಹತೋಟಿ ಮತ್ತು ಬೇಸಾಯ ಸೇರಿದಂತೆ ಆರ್ಥಿಕ ಅಭಿವೃದ್ಧಿ ಕಡ್ಡಾಯ ಕಾರ್ಯಗಳು. ಅಧಿನಿಯಮ 42ನೇ ವಿಧಿಗೆ ತಿದ್ದುಪಡಿ ಮಾಡಿ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಯೋಗಕ್ಷೇಮ ನೋಡಿಕೊಳ್ಳುವುದು ಕಡ್ಡಾಯವಾಗಿದೆ. ವಿವೇಚನಾಧೀನ ಕಾರ್ಯಗಳಲ್ಲಿ ವೈದ್ಯಕೀಯ ನೆರವು, ಮಾರುಕಟ್ಟೆ ಸಂಖ್ಯೆ, ಮಾಹಿತಿ ಮುಂತಾದ ವ್ಯಾಪಕ ಚಟುವಟಿಕೆಗಳನ್ನು ತಾಲೂಕು ಅಭಿವೃದ್ಧಿ ಮಂಡಳಿ ಅಥವಾ ಪಂಚಾಯತ್‌ಗಳಿಗೆ ಕಾಲದಿಂದ ಕಾಲಕ್ಕೆ ಈ ಕಾರ್ಯ ಜವಾಬ್ದಾರಿಯನ್ನು ವಹಿಸಿಕೊಡಲಾಗಿದೆ. ಇವುಗಳನ್ನು ನಿಯೋಗಿ ಕಾರ್ಯಗಳು ಎಂದು ಕರೆಯಬಹುದಾಗಿದೆ.

ಆಯಾ ಗ್ರಾಮದ ಭೂ ಕಂದಾಯ ಶೇ 0.30ರಷ್ಟು ಮತ್ತು ಅದರ ಶೇ0.10 ರಷ್ಟು ವಿವೇಚನಾಧೀನ ಅನುದಾನವು ಪ್ರತಿ ಪಂಚಾಯತ್‌ಗೆ ಲಭ್ಯವಿದೆ. ಇವುಗಳಿಗೆ ಸೇರಿದ ಭೂಮಿ, ಕಟ್ಟಡಗಳು ವೃತ್ತಿಗಳು, ವ್ಯಾಪಾರಗಳು, ಉದ್ಯೋಗಗಳು ಮತ್ತು ನೌಕರಿ, ಜಾತ್ರೆಗಳು ಮತ್ತು ಹಬ್ಬಗಳು ಮನೋರಂಜನೆಗಳು, ವಾಹನಗಳು ಇವುಗಳ ಮೇಲೆ ತೆರಿಗೆಗಳನ್ನು ಬಸ್ ನಿಲ್ದಾಣಗಳು, ಮಾರುಕಟ್ಟೆಗಳು, ಜಲಾಗಾರಗಳು ಇವುಗಳ ಮೇಲೆ ಶುಲ್ಕ ವಿಧಿಸಬಹುದಾಗಿದೆ. ಪಂಚಾಯತ್ ಹಂತದಲ್ಲಿ ಕಾರ್ಯದರ್ಶಿ ಅಥವಾ ಗ್ರಾಮಲೆಕ್ಕಿಗ ಕಾರ್ಯನಿರ್ವಹಿಸುತ್ತಾರೆ. ವಾರ್ಷಿಕ 12000 ರೂ.ಗಿಂತ ಹೆಚ್ಚು ಆದಾಯವಿರುವ ಪಂಚಾಯತ್‌ಗಳಿಗೆ ಪ್ರತ್ಯೇಕ ಪಂಚಾಯತ್ ಕಾರ್ಯದರ್ಶಿಯನ್ನು ನೇಮಿಸಬಹುದಾಗಿದೆ. ಹೀಗೆ, ಸ್ಥಳೀಯ ಸಂಘಗಳು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವ ರೀತಿ ಇತ್ತೀಚೆಗೆ ಬದಲಾಗಿದೆ. ಆದರಲ್ಲೂ ಸ್ಥಳೀಯ ಸಂಘಗಳ ಪಾತ್ರವನ್ನು ಆರ್ಥಿಕ ವಿಶ್ಲೇಷಿಸಬೇಕಾದ ಅವಶ್ಯಕತೆ ಹೆಚ್ಚಾಗಿದೆ. ಯಾಕೆಂದರೆ, ಅವುಗಳು ಸಾರ್ವಜನಿಕ ಹಣಕಾಸಿನ ನಿರ್ವಹಣೆ ಮಾಡುವ ಜವಾಬ್ದಾರಿಯನ್ನು ಹೊಂದಿವೆ ಹಾಗೂ ಜವಾಬ್ದಾರಿಯನ್ನು ಸಾರ್ವಜನಿಕ ಸೌಲಭ್ಯ ಒದಗಿಸಲು ಅವುಗಳು ಹೇಗೆ ಕಾರ್ಯ ನಿರ್ವಹಣೆ ಮಾಡುತ್ತವೆ ಎಂಬುವುದನ್ನು ತಿಳಿಯುವುದು ಆಸಕ್ತಿಯ ವಿಷಯ. ಈ ರೀತಿಯ ವಿಮರ್ಶೆಯಿಂದ ಮುಂದಿನ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ನಾವು ದಕ್ಷಿಣ ಕನ್ನಡ ಜಿಲ್ಲೆಯ ಅವಲೋಕನ ಮಾಡಬಹುದಾಗಿದೆ.

ಅಧ್ಯಾಯ –3

# ದಕ್ಷಿಣ ಕನ್ನಡ ಜಿಲ್ಲೆಯ ಅಭಿವೃದ್ಧಿ ಮತ್ತು ಸ್ಥಳೀಯ ಸಂಸ್ಥೆಗಳು

- ಪೀಠಿಕೆ
- ದಕ್ಷಿಣಕನ್ನಡ ಜಿಲ್ಲೆಯ ಪಕ್ಷಿನೋಟ
- ಜಿಲ್ಲಾದಾಯ
- ಸ್ಥಳೀಯ ಸಂಸ್ಥೆಗಳ ಇತಿಹಾಸ
- ಸ್ಥಳೀಯ ಸಂಸ್ಥೆಗಳ ಸ್ವರೂಪ
- ಪಂಚಯತ್ ರಾಜ್ ವ್ಯವಸ್ಥೆ
- ನಗರ ಸ್ಥಳೀಯಾಡಳಿತ ಸಂಸ್ಥೆಗಳು
- ದಕ್ಷಿಣಕನ್ನಡ ಜಿಲ್ಲೆಯಲ್ಲಿ ಬ್ಯಾಂಕ್ ಮತ್ತು ಸ್ಥಳೀಯ ಸಹಕಾರಿ ಸಂಸ್ಥೆಗಳು

## ಪೀಠಿಕೆ

ದಕ್ಷಿಣ ಕನ್ನಡ ಜಿಲ್ಲೆಯು ಕರ್ನಾಟಕದ ಕಡಲ ಕಿನಾರೆಯನ್ನು ಹೊಂದಿದ ಜಿಲ್ಲೆಗಳ ಪೈಕಿ ಒಂದಾಗಿದೆ. ಜಿಲ್ಲೆಯು ಸುಮಾರು 60.ಕಿ.ಮಿ.ಉದ್ದದ ಅರಬಿ ಸಮುದ್ರದ ಕಡಲ ತೀರವನ್ನು ಹೊಂದಿದೆ. ಜಿಲ್ಲೆಯು "ಪರಶುರಾಮನ ನಾಡು" ಎಂದೇ ಪ್ರಖ್ಯಾತವಾಗಿದ್ದು ತನ್ನದೇ ಆದ ಇತಿಹಾಸವನ್ನು ಹೊಂದಿದೆ. 1560ರಲ್ಲಿ ಈ ಜಿಲ್ಲೆಯು ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಆನಂತರ 1763ರಲ್ಲಿ ಹೈದರಾಲಿಯು ಮೈಸೂರು ರಾಜ್ಯಕ್ಕೆ ಈ ಜಿಲ್ಲೆಯನ್ನು ಸೇರಿಸಿದರು. ಆ ಬಳಿಕ ಆತನ ಮಗನಾದ ಟಿಪ್ಪು ಸುಲ್ತಾನನು ಈ ಜಿಲ್ಲೆಯನ್ನು ಆಳುತ್ತಿದ್ದು 1799ರ ಮೈಸೂರು ಕದನದ ಬಳಿಕ ಇದು ಬ್ರಿಟೀಷ್ ಸಾಮ್ರಾಜ್ಯದ ಒಂದು ಅಂಗವಾಯಿತು. ಸ್ವಾತಂತ್ರ್ಯ ನಂತರ 1956ರಲ್ಲಿ ಭಾಷಾವಾರು ಪ್ರಾಂತ್ಯದ ರಚನೆಯ ಬಳಿಕ ಇದು ಕರ್ನಾಟಕದ 20 ಜಿಲ್ಲೆಗಳಲ್ಲಿ ಒಂದಾಗಿ ಅಸ್ತಿತ್ವಕ್ಕೆ ಬಂತು. 1997ರಲ್ಲಿ ಜಿಲ್ಲೆಯು ವಿಭಜಿಸಲ್ಪಟ್ಟು ಪ್ರತ್ಯೇಕ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಾಗಿ ರೂಪಗೊಂಡಿತು.

ಪ್ರಸ್ತುತ ದ.ಕ. ಜಿಲ್ಲೆಯು ಪೂರ್ವ ದಿಕ್ಕಿನಲ್ಲಿ ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆ, ದಕ್ಷಿಣದಲ್ಲಿ ಕೊಡಗು ಜಿಲ್ಲೆ ಹಾಗೂ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆ, ಹಾಗೂ ಉತ್ತರದಲ್ಲಿ ಉಡುಪಿ ಜಿಲ್ಲೆಗಳಿವೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರವಿದೆ. ಈ ಜಿಲ್ಲೆಯ ಒಟ್ಟು 4770 ಚ.ಕಿ.ಮಿ. ವಿಸ್ತೀರ್ಣ ಹೊಂದಿದೆ. ಜಿಲ್ಲೆಯನ್ನು ಆಡಳಿತಾತ್ಮಕವಾಗಿ 2 ಉಪ ವಿಭಾಗಗಳನ್ನಾಗಿಯೂ ಮತ್ತು 5 ತಾಲೂಕುಗಳನ್ನಾಗಿಯೂ ಮತ್ತು 17 ಹೋಬಳಿಗಳನ್ನಾಗಿಯೂ ವಿಂಗಡಿಸಲಾಗಿದೆ. ಜಿಲ್ಲೆಯಲ್ಲಿ 354 ಜನವಸತಿ ಗ್ರಾಮಗಳು, 1 ಮಹಾನಗರಪಾಲಿಕೆ, 4 ಪುರಸಭೆ ಹಾಗೂ 3 ನಗರ ಪಂಚಾಯತ್‌ಗಳು ಇವೆ. ದಕ್ಷಿಣಕನ್ನಡ ಜಿಲ್ಲೆಯನ್ನು ಪ್ರಾಕೃತಿಕವಾಗಿ ಕರಾವಳಿ ಪ್ರದೇಶ, ಒಳನಾಡು ಪ್ರದೇಶ ಹಾಗೂ ಪಶ್ಚಿಮ ಘಟ್ಟಗಳ ಪ್ರದೇಶ ಎಂದು 3 ವಿಭಾಗಗಳಾಗಿ ವಿಂಗಡಿಸಲಾಗಿದೆ.

ಯಾವುದೇ ಪ್ರದೇಶದ ಸಮಗ್ರ ಪ್ರಗತಿ ಅಲ್ಲಿನ ಆರ್ಥಿಕ ಅಭಿವೃದ್ಧಿಯನ್ನು ಅವಲಂಬಿಸಿರುತ್ತವೆ. ಆಯಾ ಪ್ರದೇಶದಲ್ಲಿ ಲಭ್ಯವಿರುವ ನೈಸರ್ಗಿಕ ಸಂಪತ್ತು, ಮಾನವ ಸಂಪತ್ತು, ಕೃಷಿ ಕೈಗಾರಿಕೆ, ಬ್ಯಾಂಕಿಂಗ್, ವಾಣಿಜ್ಯ–ವ್ಯಾಪಾರ, ಸಾರಿಗೆ ಮತ್ತು ಸಂಪರ್ಕ, ಉಳಿತಾಯ ಕ್ಷಮತೆ ಬಂಡವಾಳ ಹೂಡಿಕೆ, ನಗರೀಕರಣ ಉದ್ಯೋಗ, ಕೂಲಿ (ಮಜೂರಿ), ತಲಾದಾಯ, ಅಗತ್ಯ ವಸ್ತುಗಳ ಬೆಲೆ (ದರ) ಜನರ ಜೀವನ ಮಟ್ಟ ಮುಂತಾದ ಹಲವು ಕ್ಷೇತ್ರಗಳಲ್ಲಿ ಕಂಡು ಬರುವ ಏರಿಳಿತಗಳನ್ನು ಆಧರಿಸಿದ ಆರ್ಥಿಕ ಪ್ರವೃತ್ತಿಗಳು ಆಯ್ಕೆ ಪ್ರದೇಶದ ಆರ್ಥಿಕ ಮನ್ನಣೆಯನ್ನು ನಿರ್ದೇಶಿಸುತ್ತದೆ. ಈ ನಿಟ್ಟಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸರ್ವಾಂಗಿಣ ಬೆಳವಣಿಗೆಯನ್ನು ಪ್ರತಿಬಿಂಬಿಸುತ್ತದೆ. ಕೋಷ್ಟಕ 3.1 ರಲ್ಲಿ ಗಮನಿಸಬಹುದು. ದಕ್ಷಿಣಕನ್ನಡ ಜಿಲ್ಲೆಯ ಪ್ರಮುಖ ಅಂಕಿ ಅಂಶಗಳನ್ನು ಈ ರೀತಿಯಲ್ಲಿ ಗಮನಿಸಬಹುದು. ಜಿಲ್ಲೆಯ ಪರಿಚಯವನ್ನು ಕೋಷ್ಟಕ 3.1 ಮುಖಾಂತರ ತಿಳಿಯಬಹುದು.

**ಕೋಷ್ಟಕ-3.1: ದಕ್ಷಿಣ ಕನ್ನಡ ಜಿಲ್ಲೆಯ ಪಕ್ಷಿನೋಟ**

| | |
|---|---|
| ಭೌಗೋಳಿಕ ವಿಸ್ತೀರ್ಣ | 4560 ಚ.ಕಿ.ಮಿ |
| ಕರ್ನಾಟಕ ರಾಜ್ಯದಲ್ಲಿ ಪಾಲು | 2.38 ಶೇ. |
| ಒಟ್ಟು ಜನಸಂಖ್ಯೆ ಜನಗಣತಿ | 1897730 |
| ಮಹಿಳೆಯರು | 959296 |
| ಪುರುಷರು | 938434 |
| ಸಾಕ್ಷರತೆಯ ಪ್ರಮಾಣ | 1391738 |

**ಮೂಲ:** *ದಕ್ಷಿಣ ಕನ್ನಡ ಜಿಲ್ಲಾ ವಾರ್ಷಿಕ ವರದಿ 2011-12*

## ಜಿಲ್ಲಾದಾಯ

ಜಿಲ್ಲಾ ಆದಾಯವೆಂದು ಸಾಮಾನ್ಯವಾಗಿ ಕರೆಯಲಾಗುವ ಜಿಲ್ಲಾ ನಿವ್ವಳ ಆಂತರಿಕ ಉತ್ಪನ್ನವು, ಜಿಲ್ಲೆಯ ಆರ್ಥಿಕ ಅಭಿವೃದ್ಧಿಯ ಗುಣಮಟ್ಟವನ್ನು ಅಳತೆ ಮಾಡುವ ಮುಖ್ಯ ಸೂಚಿಯಾಗಿದೆ. ಆಯಾ ವರ್ಷದಲ್ಲಿ ಜಿಲ್ಲೆಯಲ್ಲಿ ಉತ್ಪತ್ತಿಯಾಗುವ ಸರಕು ಮತ್ತು ಸೇವೆಗಳ ಒಟ್ಟು ಮೌಲ್ಯವನ್ನು ಇದರಿಂದ ತಿಳಿಯಬಹುದು. ಪ್ರಸಕ್ತ ಬೆಲೆಗಳು ಜಿಲ್ಲೆಯ ನಿವ್ವಳ ಆಂತರಿಕ ಉತ್ಪನ್ನದ ಅಂದಾಜುಗಳು, ಚಾಲ್ತಿಯಲ್ಲಿರುವ ಬೆಲೆಗಳ ಮೇರೆಗೆ ಹುಟ್ಟುವಳಿ ಮೌಲ್ಯವನ್ನು ಪ್ರತಿಬಿಂಬಿಸುತ್ತದೆ. ಸ್ಥಿರ ಬೆಲೆಗಳು ಈ ಅಂದಾಜು ಬೆಲೆಗಳ ಪ್ರತಿಬಿಂಬಿಸುತ್ತದೆ. ತಲಾವಾರು ನಿವ್ವಳ ಆಂತರಿಕ ಉತ್ಪನ್ನವು ಜಿಲ್ಲೆಯ ಆರ್ಥಿಕ ಬೆಳವಣಿಗೆಯನ್ನು ಗುರುತಿಸುವ ಮಾಪನವಾಗಿದೆ. ಇದು ಪ್ರಾದೇಶಿಕ ಅಸಮತೋಲನವನ್ನು ಅಳೆಯಲೂ ಸಹಕರಿಸುತ್ತದೆ. ಜಿಲ್ಲೆಯ ಪ್ರಕೃತಿ ಸಂಪತ್ತನ್ನು ಬಳಸಿಕೊಂಡು, ಬಂಡವಾಳ ಮತ್ತು ಮಾನವಶ್ರಮಗಳು, ಪ್ರತಿವರ್ಷವೂ, ಉತ್ಪಾದಿಸುವ ಸರಕು ಮತ್ತು ಸೇವೆಗಳ ನಿವ್ವಳ ಮೊತ್ತದ ಮೌಲ್ಯವೇ ಜಿಲ್ಲಾದಾಯ. ತಲಾ ಆದಾಯವು ಜಿಲ್ಲೆಯ ಆರ್ಥಿಕ ಅಭಿವೃದ್ಧಿಯ ಗುಣಮಟ್ಟವನ್ನು ಅಳತೆ ಮಾಡುವ ಮತ್ತೊಂದು ಸೂಚಿಯಾಗಿದೆ. ವಿವಿಧ ಜಿಲ್ಲೆಗಳ ತಲಾವಾರು ವರಮಾನಗಳು ಸಂವಾದಿಯಾಗಿ ಹಾಗೂ ನಿರಂತರವಾಗಿ ಏರಿಕೆಯಾಗಿದೆ, ಆದುದರಿಂದ ಪ್ರತತಿ ಪ್ರಮಾಣದ ಅಂತರ, ಅಸಮಾನತೆ ಮತ್ತು ಹಿಂದುಳಿದಿರುವಿಕೆಯನ್ನು ಗುರುತಿಸಿ, ಕಾರಣಗಳನ್ನು ಕಂಡುಕೊಂಡು ಅವುಗಳಿಗಾಗಿ ಅಭಿವೃದ್ಧಿಯೋಜನೆಗಳನ್ನು ರೂಪಿಸಿ ಜಾರಿಗೆ ತರಲು ಅನುಕೂಲವಾಗುತ್ತದೆ.

ಜಿಲ್ಲೆಯ ವಲಯ ಮತ್ತು ತಲಾದಾಯವನ್ನು ಕೋಷ್ಟಕ-3.2 ಮುಖಾಂತರ ತಿಳಿಯಬಹುದು.

**ಕೋಷ್ಟಕ-3.2: ದಕ್ಷಿಣ ಕನ್ನಡ ಜಿಲ್ಲಾ ಮತ್ತು ತಲಾದಾಯ**

| ವಲಯ | ಜಿಡಿಪಿ | | ಬೆಳವಣಿಗೆ ದರ(ಶೇ.) |
|---|---|---|---|
| | 1999-2000 | 2007-08 | |
| ಪ್ರಥಮ ವಲಯ | 108219 | 148360 | 37.09 |
| ದ್ವಿತೀಯ ವಲಯ | 116511 | 430702 | 269.66 |
| ತೃತೀಯ ವಲಯ | 256914 | 465447 | 81.16 |
| ಒಟ್ಟು | 481644 | 1044509 | 116.86 |
| ತಲಾದಾಯ | 22932 | 51358 | 98.02 |

**ಮೂಲ:** *ದಕ್ಷಿಣ ಕನ್ನಡ ಜಿಲ್ಲೆಯ ವಾರ್ಷಿಕ ವರದಿ*

### ಕೋಷ್ಟಕ–3.3: ದ.ಕ.ಜಿಲ್ಲಾ ಆದಾಯ

| ಆದಾಯದ ಮೂಲ | ಚಾಲ್ತಿ ಬೆಲೆಗಳಲ್ಲಿ (1999–2000) | | ಚಾಲ್ತಿ ಬೆಲೆಗಳಲ್ಲಿ (2007–08) | | ಚಾಲ್ತಿ ಬೆಲೆಗಳಲ್ಲಿ (2007–08) | |
|---|---|---|---|---|---|---|
| | ಒಟ್ಟು | ನಿವ್ವಳ | ಒಟ್ಟು | ನಿವ್ವಳ | ಒಟ್ಟು | ನಿವ್ವಳ |
| ಕೃಷಿ ಮತ್ತು ಸಂಗೋಪನೆ | 91208 | 86292 | 109025 | 99579 | 88504 | 81200 |
| ಅರಣ್ಯಮತ್ತು ಮರ ಕತ್ತರಿಸುವುದು | 6324 | 6023 | 10152 | 9790 | 7792 | 7474 |
| ಮೀನುಗಾರಿಕೆ | 10801 | 9654 | 28955 | 23595 | 73569 | 10758 |
| ಗಣಿ ಮತ್ತು ಖನಿಜ ಉತ್ಪಾದನೆ | 86 | 63 | 228 | 194 | 133 | 104 |
| ತಯಾರಿಕೆ 1.ನೋಂದಾಯಿಸಿದ 2.ನೋಂದಾಯಿಸಿಲ್ಲದ | 34647 | 23916 | 207987 | 154109 | 148027 | 108799 |
| ನಿರ್ಮಾಣ ಕಾರ್ಯ | 38825 | 32470 | 81530 | 60519 | 61006 | 46767 |
| ವಿದ್ಯುಚ್ಛಕ್ತಿ ಅನಿಲ ಮತ್ತು ನೀರು ಸರಬರಾಜು | 35594 | 34698 | 126681 | 123127 | 92799 | 90141 |
| ರೈಲ್ವೆ | 7445 | 3998 | 14524 | 6119 | 10744 | 4317 |
| ಇತರರೀತಿಯ ಸಾರಿಗೆ | 1624 | 1190 | 9368 | 6625 | 8464 | 6757 |
| ದಾಸ್ತಾನು | 36445 | 27738 | 54250 | 39210 | 39013 | 27490 |
| ಸಂಪರ್ಕ | 76 | 71 | 261 | 206 | 191 | 153 |
| ವ್ಯಾಪಾರ, ವಸತಿ ಮತ್ತು ಉಪಹಾರ | 9282 | 6617 | 25648 | 18290 | 42512 | 37236 |
| ಗೃಹಗಳು | 96554 | 94256 | 144807 | 140380 | 91357 | 88427 |
| ಬ್ಯಾಂಕ್ ಮತ್ತು ವಿಮೆ ಉದ್ದಿಮೆ | 44714 | 43242 | 77061 | 74842 | 69471 | 67853 |
| ಸ್ಥಿರಾಸ್ತಿ, ವಾಸಗೃಹಗಳು ಒಡೆತನ ಮತ್ತು ವ್ಯವಹಾರದ ಸೇವೆಗಳು | 29208 | 26667 | 73991 | 66404 | 48165 | 42958 |
| ಸಾರ್ವಜನಿಕ ಆಡಳಿತ | 12811 | 11015 | 24298 | 19136 | 19607 | 16105 |
| ಇತರ ಸೇವೆಗಳು | 26200 | 25102 | 55963 | 52173 | 41009 | 37813 |
| ಒಟ್ಟು ಆದಾಯ | 481644 | 433012 | 1044509 | 894298 | 782363 | 374352 |
| ತಲಾ ಆದಾಯ (ರೂಪಾಯಿಗಳಲ್ಲಿ) | 25932 | 23314 | 51353 | 43967 | 38464 | 33154 |

**ಮೂಲ:** *ಮುಖ್ಯಯೋಜನಾಧಿಕಾರಿ, ದ.ಕ.ಜಿಲ್ಲಾ ಪಂಚಾಯತ್, ಮಂಗಳೂರು.*

ದಕ್ಷಿಣಕನ್ನಡ ಜಿಲ್ಲೆಯ ಆದಾಯ ಮತ್ತು ತಲಾದಾಯವನ್ನು ಕೋಷ್ಟಕ-3.4ರಲ್ಲಿ ಗಮನಿಸಬಹುದಾಗಿದೆ

**ಕೋಷ್ಟಕ-3.4: ಜಿಲ್ಲಾದಾಯ ಮತ್ತು ತಲಾದಾಯ**

| ವಲಯ | ಜಿಲ್ಲಾದಾಯ ಮತ್ತು ತಲಾದಾಯ (ಲಕ್ಷ.ರೂ.ಗಳಲ್ಲಿ) | | | |
|---|---|---|---|---|
| | District cross domestic period at current price (2007-08) | (1999-2000) | Net district domestic Period at current (2007-08) | 1999-2000 |
| **ಪ್ರಾಥಮಿಕ ವಲಯ** | | | | |
| ಕೃಷಿ ಪಶುಸಂಗೋಪನೆ | 109025 | 91208 | 99579 | 86292 |
| ಅರಣ್ಯ ಮತ್ತು ಮರಗೆಲಸ | 10152 | 6324 | 9790 | 6023 |
| ಮೀನುಗಾರಿಕೆ | 28955 | 10601 | 23595 | 9654 |
| ಗಣಿ ಮತ್ತು ಕಲ್ಲು ಅಗೆತ | 228 | 86 | 194 | 63 |
| ಪ್ರಾಥಮಿಕ ವಲಯದ ಒಟ್ಟು | 148360 | 108219 | 133158 | 102032 |
| **ದ್ವಿತೀಯ ವಲಯ** | | | | |
| ತಯಾರಿಕೆ ನೋಂದಾಯಿಸಿದ | 207967 | 34647 | 154109 | 23916 |
| ತಯಾರಿಕೆ ನೋಂದಾಯಿಸಿಲ್ಲದ | 81530 | 38825 | 60519 | 32470 |
| ನಿರ್ಮಾಣ ಕಾರ್ಯ | 126681 | 35594 | 123127 | 34698 |
| ವಿದ್ಯುಚ್ಛಕ್ತಿ ಅನಿಲ ಮತ್ತು ನೀರು ಸರಬರಾಜು | 14524 | 7445 | 6119 | 3998 |
| ದ್ವಿತೀಯ ವಲಯದ ಒಟ್ಟು | 430702 | 116511 | 343874 | 95082 |
| **ತೃತೀಯ ವಲಯ** | | | | |
| ರೈಲ್ವೆ | 54250 | 36445 | 39210 | 27738 |
| ಇತರ ರೀತಿಯ ಸಾರಿಗೆ | 261 | 76 | 206 | 71 |
| ದಾಸ್ತಾನು | 25648 | 9282 | 18290 | 6617 |
| ಸಂಪರ್ಕ | 25648 | 9282 | 18290 | 6617 |
| ವ್ಯಾಪಾರ ವಸತಿ ಮತ್ತು ಉಪಹಾರ ಗೃಹಗಳು | 144607 | 96554 | 140380 | 94256 |
| ಬ್ಯಾಂಕುಗಳು ಮತ್ತು ವಿಮೆ | 77061 | 44714 | 74842 | 43242 |
| ಸ್ಥಿರಾಸ್ತಿ, ವಾಸ ಗೃಹಗಳ ಒಡೆತನ ಮತ್ತು ವ್ಯಾಪಾರ ಸೇವೆಗಳು | 73991 | 29208 | 66404 | 2667 |
| ಸಾರ್ವಜನಿಕ ಆಡಳಿತ | 24298 | 12811 | 19136 | 11015 |
| ಇತರ ಸೇವೆಗಳು | 55963 | 26200 | 52173 | 25102 |
| ತೃತೀಯ ವಲಯದ ಒಟ್ಟು | 465447 | 256914 | 417266 | 235898 |
| ಒಟ್ಟು ಆಂತರಿಕ ಉತ್ಪನ್ನ (1+2+ 3) | 1044509 | 481644 | 894298 | 433012 |
| ತಲಾವಾರು ಒಟ್ಟು ಆಂತರಿಕ ಉತ್ಪನ್ನ (1+2+3) | 51353 | 25932 | 43967 | 23314 |

*ಮೂಲ: ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು*

ದಕ್ಷಿಣಕನ್ನಡ ಜಿಲ್ಲೆಯ ಜಿಡಿಪಿ(Gross Domestic Product)ಯನ್ನು ವಲಯಗಳ ಬೆಳವಣಿಗೆಯ ಮುಖಾಂತರ ತಿಳಿಯಬಹುದಾಗಿದೆ. 1999–08ವರೆಗೆ ಪ್ರಥಮ ವಲಯದಿಂದ ಶೇಕಡಾ 37.08ರಷ್ಟು ಅಭಿವೃದ್ಧಿಯನ್ನು, ದ್ವಿತೀಯ ವಲಯದಿಂದ 269.66ಶೇಕಡಾ ಅಭಿವೃದ್ಧಿಯನ್ನು ಮತ್ತು ತೃತೀಯ ವಲಯದಿಂದ 81.16ಶೇಕಡಾ ಅಭಿವೃದ್ಧಿಯನ್ನು ನೋಡುತ್ತೇವೆ. ಈ ಅಭಿವೃದ್ಧಿಯಿಂದ ತಲಾದಾಯದಲ್ಲಿಯೂ ಹೆಚ್ಚಳ ಕಾಣುತ್ತೇವೆ (98.02ಶೇ).

ದಕ್ಷಿಣಕನ್ನಡ ಜಿಲ್ಲೆಯಲ್ಲಿ ಆದಾಯದ ಮೂಲಗಳನ್ನು ಗಮನಿಸುವಾಗ ಕೃಷಿ, ಅರಣ್ಯ, ಗಣಿ, ಖನಿಜ, ರೈಲ್ವೆ, ಸಂಪರ್ಕ, ಬ್ಯಾಂಕ್, ವಿಮೆ, ಅನಿಲ, ನೀರು, ಸಾರ್ವಜನಿಕ ಆಡಳಿತ, ಇತರ ಸೇವೆಗಳ ಮೂಲಗಳನ್ನು ಗಣನೆಗೆ ತೆಗೆದುಕೊಂಡು ಆದಾಯವನ್ನು ಎಣಿಕೆಯನ್ನು ಕೋಷ್ಟಕ 3.3ರಲ್ಲಿ ಗಮನಿಸಬಹುದಾಗಿದೆ.

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ಯಾಂಕ್ ಮತ್ತು ಸ್ಥಳೀಯ ಸಹಕಾರಿ ಸಂಸ್ಥೆಗಳು

ದ.ಕ.ಜಿಲ್ಲೆ ಬ್ಯಾಂಕ್‌ಗಳ ತವರು ಮನೆ ಎಂದೇ ಪ್ರಖ್ಯಾತಿ ಹೊಂದಿರುತ್ತದೆ. ಏಕೆಂದರೆ ದೇಶದ ಪ್ರಮುಖ ಬ್ಯಾಂಕ್‌ಗಳು ದ.ಕ.ಜಿಲ್ಲೆಯಲ್ಲಿಯೇ ಹುಟ್ಟಿಕೊಂಡಿರುತ್ತದೆ. ಜಿಲ್ಲೆಯಲ್ಲಿ ರಾಷ್ಟ್ರೀಕೃತ ಮತ್ತು ಗ್ರಾಮೀಣ ಬ್ಯಾಂಕ್‌ಗಳ ಚಿತ್ರಣವನ್ನು ಕೋಷ್ಟಕ 3.5 ರಲ್ಲಿ ತಿಳಿದು ಬರುತ್ತದೆ.

ಆಧುನಿಕ ಬ್ಯಾಂಕಿಂಗ್ ವ್ಯವಸ್ಥೆ ರೂಪುಗೊಳ್ಳುವ ಪೂರ್ವದಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹಣಕಾಸಿನ ಸಾಲದ ವ್ಯವಹಾರಗಳು ಸೀಮಿತ ಪ್ರಮಾಣದಲ್ಲಿ ನಡೆಯುತ್ತಿದ್ದವು. ವ್ಯಾಪಾರಿಗಳು ಖಾಸಗಿ ಲೇವಾದೇವಿಗಾರರಿಂದ ಅತಿ ಹೆಚ್ಚಿನ ಬಡ್ಡಿದರದ ಮೇಲೆ ಸಾಲವನ್ನು ಪಡೆಯಬೇಕಾಗುತ್ತಿತ್ತು. ಜನಸಮುದಾಯಕ್ಕೆ ಉಳಿತಾಯ ಸೌಲಭ್ಯವನ್ನು ಒದಗಿಸುವ ಅಥವಾ ವ್ಯಾಪಾರ ವಹಿವಾಟಿಗೆ ಸಾಲ ಒದಗಿಸುವ ಯಾವುದೇ ಸ್ಥಳೀಯ ಹಣಕಾಸು ಸಂಸ್ಥೆಗಳು ಆಗಿನ್ನು ಹುಟ್ಟಿಕೊಂಡಿರಲಿಲ್ಲ. ಅನಂತರದಲ್ಲಿ ವ್ಯಾಪಾರ ವಹಿವಾಟುಗಳು ವಿಸ್ತಾರಗೊಂಡು ವೈವಿಧ್ಯತೆಯನ್ನು ಹೊಂದಿದುದರಿಂದ ಹಾಗೂ ಹಣಕಾಸಿನ ವ್ಯಾಪಕ ಬಳಕೆಯ ಪರಿಣಾಮದಿಂದಾಗಿ ವೈಯಕ್ತಿಕ ಸಾಲ ಕೊಡುಕೊಳ್ಳುವಿಕೆ ವ್ಯವಹಾರಗಳೂ ಹೆಚ್ಚುವಂತಾದವು. ಯಾವುದೇ ಆಧಾರವಿಲ್ಲದೇ ನೀಡಲಾದ ಸಾಲದ ಮೇಲೆ ಪಡೆಯಲಾದ ಬಡ್ಡಿಯ ಹಣದಲ್ಲಿ ಸಾಮಾನ್ಯವಾಗಿ ಒಂದು ಪಾಲನ್ನು ದೇವಾಲಯಗಳಿಗೂ ಸಂದಾಯವಾಗುತ್ತಿದ್ದ ವಿಷಯ ಚಾರಿತ್ರಿಕ ಆಧಾರಗಳಿಂದ ತಿಳಿಯಬಹುದಾಗಿದೆ. ಯಾವುದೇ ಆಧಾರವಿಲ್ಲದೇ ನೀಡಲಾಗುತ್ತಿದ್ದ ಅಂತಹ ಸಾಲವನ್ನು 'ಪ್ಯೆ ಸಾಲ'ವೆಂದೂ ಕರೆಯಲಾಗುತ್ತಿತ್ತು. ಹಣದ ರೂಪದಲ್ಲಿ ನೀಡಲಾದ ಸಾಲಕ್ಕೆ ಕೆಲವೊಮ್ಮೆ ಬಡ್ಡಿಯನ್ನು ವಸ್ತುವಿನ ರೂಪದಲ್ಲಿ ಪಡೆಯುವ ಪದ್ಧತಿ ಸಹ ರೂಢಿಯಲ್ಲಿತ್ತು. ವಿರಳವಾಗಿ ಇಂದಿಗೂ ಸಹ ಈ ಪದ್ಧತಿ ಆಚರಣೆಯಲ್ಲಿರುವುದು ಕಂಡುಬಂದಿದೆ. ವಿಶೇಷವಾಗಿ ಗ್ರಾಮೀಣ ಪ್ರದೇಶಕ್ಕೆ ಸಾಲ ಒದಗಿಸುವ ಲೇವಾದೇವಿಗಾರರು ಜಿಲ್ಲೆಯಲ್ಲಿ ಕಾಣಸಿಗುತ್ತಾರೆ.

ಕೋಷ್ಟಕ-3.5 :ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಮತ್ತು ರಾಷ್ಟ್ರೀಕೃತ ಬ್ಯಾಂಕ್ ಚಿತ್ರಣ

| | ರಾಷ್ಟ್ರೀಕೃತ ಬ್ಯಾಂಕುಗಳು | | | | | ಗ್ರಾಮೀಣ ಬ್ಯಾಂಕ್ ಗಳು | | | | |
|---|---|---|---|---|---|---|---|---|---|---|
| ತಾಲೂಕು | ಸಂಖ್ಯೆ | ಕೃಷಿ ಸಾಲ | ಇತರೆ ಸಾಲ (ಲ.ಗಳಲ್ಲಿ) | ಒಟ್ಟು ಸಾಲ ಲ.ಗಳಲ್ಲಿ | ಠೇವಣಿ ಲ.ಗಳಲ್ಲಿ | ಸಂಖ್ಯೆ | ಕೃಷಿ ಸಾಲ | ಇತರೆ ಸಾಲ ಲ.ಗಳಲ್ಲಿ | ಒಟ್ಟು ಸಾಲ ಲ.ಗಳಲ್ಲಿ | ಠೇವಣಿ ಲ.ಗಳಲ್ಲಿ |
| ಬಂಟ್ವಾಳ | 39 | 6315 | 19802 | 26117 | 70272 | 2 | 208 | 180 | 388 | 760 |
| ಬೆಳ್ತಂಗಡಿ | 26 | 7578 | 23762 | 31340 | 42163 | 3 | 250 | 216 | 466 | 456 |
| ಮಂಗಳೂರು | 249 | 97257 | 304950 | 402207 | 1180571 | 8 | 3204 | 2770 | 5974 | 12771 |
| ಪುತ್ತೂರು | 37 | 10105 | 31683 | 41768 | 70272 | 2 | 333 | 283 | 621 | 760 |
| ಸುಳ್ಯ | 23 | 5053 | 15842 | 20895 | 42164 | 3 | 166 | 144 | 310 | 457 |
| ಒಟ್ಟು | 374 | 126308 | 396039 | 522347 | 1405442 | 18 | 4161 | 3598 | 7759 | 15204 |

*ಮೂಲ: ವಾರ್ಷಿಕ ಆಡಳಿತ ವರದಿ ಜಿ.ಪಂ.ದ.ಕ.*

## ಸಹಕಾರಿ ಸಂಸ್ಥೆಗಳು

ಜಿಲ್ಲೆಯಲ್ಲಿ ಸಹಕಾರಿ ಸಂಸ್ಥೆಗಳು ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಜಿಲ್ಲೆಯ ಪ್ರಮುಖ ಸಹಕಾರಿ ಸಂಸ್ಥೆಯಾದ ಕ್ಯಾಂಪ್ಕೊ ಏಷ್ಯಾದಲ್ಲೇ ಅತೀ ದೊಡ್ಡ ಸಹಕಾರಿ ಸಂಸ್ಥೆ. ಸ್ವಾತ್ರಂತ್ರ ಬಳಿಕ ಜಿಲ್ಲೆಯಲ್ಲಿ ಸಹಕಾರಿ ಸಂಸ್ಥೆಗಳು ಮುಖ್ಯವಾಗಿ ಕೃಷಿ ಕ್ಷೇತ್ರದ ಅಭಿವೃದ್ಧಿಗೆ ಮಹತ್ತ್ವದ ಕೊಡುಗೆ ಕೊಟ್ಟಿರುತ್ತದೆ. ದಕ್ಷಿಣಕನ್ನಡ ಜಿಲ್ಲೆಯ ಪತ್ತಿನ ಸಹಕಾರಿ ಸಂಘಗಳ ವಿವರವನ್ನು ಕೋಷ್ಟಕ 3.6ರಲ್ಲಿ ಗಮನಿಸಬಹುದು.

**ಕೋಷ್ಟಕ–3.6: ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಮತ್ತು ಕೃಷಿ ಮಾರಾಟ ಮಳಿಗೆ**

| ತಾಲೂಕು | ಒಟ್ಟು ಬ್ಯಾಂಕ್‌ಗಳು | | | | | ಒಟ್ಟು ಸಾಲಗಳು/ಠೇವಣಿಗಳು ಅನುಪಾತ | | | |
|---|---|---|---|---|---|---|---|---|---|
| | ಸಂಖ್ಯೆ | ಕೃಷಿ ಸಾಲ | ಇತರೆ ಸಾಲ | ಒಟ್ಟು ಸಾಲ | ಠೇ | ಒಟ್ಟು ಠೇವಣಿ | ಒಟ್ಟು ಸಾಲ | ಸಾಲ ಠೇ. ಅನುಪಾತ | ಒಟ್ಟು ಕೃಷಿ ಸಾಲ |
| ಬಂಟ್ವಾಳ | – | – | – | – | – | – | – | – | – |
| ಬೆಳ್ತಂಗಡಿ | – | – | – | – | – | – | – | – | – |
| ಮಂಗಳೂರು | 7 | – | 259.7 | 259.7 | 371.6 | – | – | – | – |
| ಪುತ್ತೂರು | 1 | – | – | 16.81 | 23.94 | 23.94 | 16.81 | 70.21 | – |
| ಸುಳ್ಯ | – | – | – | – | -- | | – | – | – |
| ಒಟ್ಟು | 8 | – | 259.7 | 276.5 | 395.5 | 23.94 | 16.81 | 70.21 | |

ಮೂಲ: ವಾರ್ಷಿಕ ಆಡಳಿತ ವರದಿ ಜಿ.ಪಂ.ದ.ಕ.

**ಕೋಷ್ಟಕ–3.7: ದಕ್ಷಿಣ ಕನ್ನಡ ಜಿಲ್ಲೆಯ ಪತ್ತಿನ ಸಹಕಾರ ಸಂಘಗಳು**

| ತಾಲೂಕು | ವ್ಯವಸಾಯ | | ವ್ಯವಸಾಯೇತರ | | ಒಟ್ಟು | |
|---|---|---|---|---|---|---|
| | ಸಂಘ | ಸದಸ್ಯರು | ಸಂಘ | ಸದಸ್ಯರು | ಸಂಘ | ಸದಸ್ಯರು |
| ಬಂಟ್ವಾಳ | 28 | 60294 | 5 | 2139 | 33 | 62433 |
| ಬೆಳ್ತಂಗಡಿ | 23 | 66050 | 19 | 22473 | 42 | 88523 |
| ಮಂಗಳೂರು | 21 | 66361 | 40 | 53513 | 61 | 119874 |
| ಪುತ್ತೂರು | 19 | 54726 | 16 | 19236 | 35 | 73962 |
| ಸುಳ್ಯ | 23 | 82554 | 15 | 16328 | 38 | 98882 |
| ಒಟ್ಟು | 114 | 329985 | 95 | 113689 | 209 | 443674 |

ಮೂಲ: ವಾರ್ಷಿಕ ಆಡಳಿತ ವರದಿ ಜಿ.ಪಂ.ದ.ಕ.

ಕೋಷ್ಟಕ 3.7 ರ ಪ್ರಕಾರ ದ.ಕ.ಜಿಲ್ಲೆಯಲ್ಲಿ ಒಟ್ಟು 114 ವ್ಯವಸಾಯ, 95 ವ್ಯವಸಾಯೇತರ ಸಹಕಾರ ಸಂಘಗಳು ಕಾರ್ಯ ನಿರ್ವಹಿಸುವುದನ್ನು ತಿಳಿಯಬಹುದಾಗಿದೆ.

**ಕೋಷ್ಟಕ-3.8: ಸಹಕಾರಿ ಮತ್ತು ಕೃಷಿ ಮಾರಾಟ ಮಳಿಗೆ (ದಕ್ಷಿಣ ಕನ್ನಡ ಜಿಲ್ಲೆಯ ಪತ್ತೇತರ ಸಹಕಾರ ಸಂಘಗಳು**

| ತಾಲೂಕು | ಮಾರುಕಟ್ಟೆ | | ಗೃಹನಿರ್ಮಾಣ | | ಹಾಲು | | ಇತರೆ | | ಒಟ್ಟು | |
|---|---|---|---|---|---|---|---|---|---|---|
| | ಸಂಘ | ಸದಸ್ಯರು | ಸಂಘ | ಸದಸ್ಯರು | ಸಂಘ | ಸದಸ್ಯರು | ಸಂಘ | ಸದಸ್ಯರು | ಸಂಘ | ಸದಸ್ಯರು |
| ಬಂಟ್ವಾಳ | 1 | 1791 | – | – | 82 | 23944 | 11 | 20436 | 94 | 46171 |
| ಬೆಳ್ತಂಗಡಿ | 1 | 447 | 1 | 66 | 67 | 6852 | 7 | 8524 | 76 | 15889 |
| ಮಂಗಳೂರು | 3 | 8943 | 22 | 9219 | 77 | 22484 | 20 | 37140 | 122 | 77786 |
| ಪುತ್ತೂರು | 1 | 750 | 3 | 522 | 81 | 87004 | 8 | 10503 | 93 | 98779 |
| ಸುಳ್ಯ | 1 | 1048 | – | – | 45 | 42238 | 8 | 9724 | 54 | 53010 |
| ಒಟ್ಟು | 7 | 12979 | 26 | 9807 | 352 | 182522 | 54 | 86327 | 439 | 291635 |

*ಮೂಲ: ವಾರ್ಷಿಕ ಆಡಳಿತ ವರದಿ ಜಿ.ಪಂ.ದ.ಕ.*

**ಕೋಷ್ಟಕ-3.9: ದಕ್ಷಿಣ ಕನ್ನಡ ಜಿಲ್ಲೆಯ ಸಹಕಾರಿ ಮತ್ತು ಕೃಷಿ ಮಳಿಗೆ 31.3.2011 (ಪತ್ತೇತರ ಸಹಕಾರ ಸಂಘಗಳು)**

| ತಾಲೂಕು | ಮಾರುಕಟ್ಟೆ | | | ಒಟ್ಟು ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಘಗಳು | ಒಟ್ಟು ಸದಸ್ಯರು ಸಂಖ್ಯೆ | ಒಟ್ಟು ಸಹಕಾರ ಸಂಘಗಳು | ಒಟ್ಟು ಸದಸ್ಯರು ಸಂಖ್ಯೆ | ಗ್ರಾಮೀಣ ಪ್ರದೇಶದ ಸಹಕಾರಿ ಬ್ಯಾಂಕ್ ಗಳು | | |
|---|---|---|---|---|---|---|---|---|---|---|
| | ಪತ್ತಿನ | ಪತ್ತೇತರ | ಒಟ್ಟು | | | | | ಶಾಖೆಗಳು | ಠೇವಣಿ | ಸಾಲ ನೀಡಿಕೆ |
| ಬಂಟ್ವಾಳ | – | 4 | 4 | 28 | 60294 | 127 | 108614 | – | – | – |
| ಬೆಳ್ತಂಗಡಿ | – | 2 | 2 | 23 | 66050 | 118 | 104412 | – | – | – |
| ಮಂಗಳೂರು | 1 | 18 | 19 | 21 | 66351 | 183 | 197660 | 7 | 37161.39 | 25978.95 |
| ಪುತ್ತೂರು | – | 6 | 6 | 19 | 54726 | 128 | 172741 | 1 | 2394.32 | – |
| ಸುಳ್ಯ | – | 2 | 2 | 23 | 82554 | 92 | 151892 | – | – | – |
| ಒಟ್ಟು | 1 | 32 | 33 | 114 | 329985 | 648 | 735319 | 8 | 39555.71 | 25978.95 |

*ಮೂಲ: ವಾರ್ಷಿಕ ಆಡಳಿತ ವರದಿ ಜಿ.ಪಂ.ದ.ಕ.*

ಹೀಗೆ, ಬ್ಯಾಂಕ್‌ಗಳು ಮತ್ತು ಸಹಕಾರಿ ಸಂಘಗಳು ಜಿಲ್ಲೆಯ ಅಭಿವೃದ್ಧಿಯಲ್ಲಿ ಮಹತ್ತ್ವದ ಪಾತ್ರವಹಿಸಿರುವುದಕ್ಕೆ ಅನೇಕ ಪುರಾವೆಗಳಿವೆ. ಜೊತೆಗೆ, ಇತ್ತೀಚಿನ ದಿನಗಳಲ್ಲಿ ಸ್ವಸಹಾಯ ಸಂಘಗಳು ತಳಮಟ್ಟದ ಮಹಿಳೆಯರು ವಿತ್ತೀಯ ಸೇರ್ಪಡೆ ಸಹಾಯಕವಾಗುವಂತೆ ಕಿರು ಹಣಕಾಸು ಚಟುವಟಿಕೆ ನಡೆಯುತ್ತಿವೆ. ಇವರಲ್ಲೂ ವಾಣಿಜ್ಯ, ಗ್ರಾಮೀಣ ಸಹಕಾರಿ ಬ್ಯಾಂಕುಗಳು ಜೊತೆ ಸೇರಿಕೊಂಡಿವೆ. ದ.ಕ ಜಿಲ್ಲೆಯಲ್ಲಿ ಸ್ವಯಂ ಸೇವಾ ಸಂಘಗಳು ಅಭಿವೃದ್ಧಿ ಕಾರ್ಯದಲ್ಲಿ ನಾನಾ ರೀತಿಯಲ್ಲಿ ತೊಡಗಿಸಿಕೊಂಡಿವೆ. ಗ್ರಾಮೀಣ ಅಭಿವೃದ್ಧಿ, ಕೃಷಿ ಅಭಿವೃದ್ಧಿ, ಆರೋಗ್ಯ, ಉದ್ಯೋಗ ಒದಗಿಸುವ ಕಾರ್ಯಗಳು ಸ್ವಯಂ ಸೇವಾ ಸಂಸ್ಥೆಗಳಿಂದ ಗಮನಾರ್ಹವಾಗಿ ನಡೆಯುತ್ತವೆ. ಈ ಸಂಸ್ಥೆಗಳು ಕೆಲವೊಮ್ಮೆ ಸ್ಥಳೀಯ ಸಂಸ್ಥೆಗಳ ಜೊತೆಗೂಡಿ ಅಭಿವೃದ್ಧಿ ಕಾರ್ಯ ಮಾಡಿದ್ದು, ಇದೆ.

## ಸ್ಥಳೀಯ ಸಂಸ್ಥೆಗಳ ಇತಿಹಾಸ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗ ಚಾಲ್ತಿಯಲ್ಲಿರುವ ಸ್ಥಳೀಯ ಸಂಸ್ಥೆಗಳ ಸ್ವಯಂ ಆಡಳಿತ ವ್ಯವಸ್ಥೆಗೆ ಒಂದು ಐತಿಹಾಸಿಕ ಹಿನ್ನಲೆ ಇದೆ. ಬಹುಶ, 1865ರ 10ನೇ ಮದ್ರಾಸ್ ಪ್ರಾಂತ್ಯಾ ಅಭಿವೃದ್ಧಿ ಕಾಯಿದೆ ದ.ಕ.ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ಆಡಳಿತ ವ್ಯವಸ್ಥೆಯ ಮೂಲವೆಂದು ನಾವು ತಿಳಿಯಬಹುದು.

ದಕ್ಷಿಣ ಕನ್ನಡ ಜಿಲ್ಲೆಯ ಜಿಡಿಪಿ (Gross Domestic Product) ಯನ್ನು ವಲಯಗಳ ಬೆಳವಣಿಗೆಯ ಮುಖಾಂತರ ತಿಳಿಯಬಹುದಾಗಿದೆ. 1999–08ರವರೆಗೆ ಪ್ರಥಮ ವಲಯದಿಂದ ಶೇ.37.08ರಷ್ಟು ಅಭಿವೃದ್ಧಿಯನ್ನು ನೋಡುತ್ತೇವೆ. ಅದೇ ರೀತಿಯಲ್ಲಿ ದ್ವಿತೀಯ ವಲಯದಿಂದ 269.66 ಶೇ. ಅಭಿವೃದ್ಧಿಯನ್ನು ನೋಡುತ್ತೇವೆ. ಮತ್ತು ತೃತೀಯ ವಲಯದಿಂದ 81.16ಶೇ. ಅಭಿವೃದ್ಧಿಯನ್ನು ನೋಡುತ್ತೇವೆ. ಈ ಅಭಿವೃದ್ಧಿಯಿಂದ ತಲಾದಾಯದಲ್ಲಿಯೂ ಹೆಚ್ಚಳವನ್ನು ಕಾಣುತ್ತೇವೆ. (98.02ಶೇ).

ದಕ್ಷಿಣ ಕನ್ನಡ ಜಿಲ್ಲೆಯು 1656ರವರೆಗೂ ಬಹಳ ವರ್ಷಗಳ ಕಾಲ ಮದ್ರಾಸ್ ಪ್ರಾಂತ್ಯಾಡಳಿತಕ್ಕೆ ಒಳಪಟ್ಟಿತ್ತು. ಸ್ಥಳೀಯ ಸ್ವಯಂಮಾಡಳಿತ ವ್ಯವಸ್ಥೆಯು ಪ್ರಪ್ರಥಮವಾಗಿ 1865ರ ಪೌರಾಭಿವೃದ್ಧಿ ಕಾಯ್ದೆಯಂತೆ ಮೊದಲಾಯಿತು. ಈ ಕಾಯ್ದೆಯಂತೆ ಪುರಸಭೆಗಳು ಪ್ರಾರಂಭವಾದವು. 1871ರಲ್ಲಿ ಜಾರಿಯಾದ ನಾಲ್ಕನೇ ಸ್ಥಳೀಯ ನಿಧಿ ಕಾಯ್ದೆದಂತೆ ಸ್ಥಳೀಯ ನಿಧಿ ಮಂಡಳಿಗಳು ಪ್ರಾರಂಭವಾದವು. ಕ್ರಮೇಣ ಈ ಸ್ಥಳೀಯ ವ್ಯವಸ್ಥೆಯು ತಾಲೂಕು ಮಂಡಳಿ ಮತ್ತು ಜಿಲ್ಲಾ ಮಂಡಳಿಗಳ ಸ್ಥಾಪನೆಗೆ ದಾರಿ ಮಾಡಿಕೊಟ್ಟಿತು. 1884ರ ಸ್ಥಳೀಯ ಮಂಡಳಿಗಳ ಅಧಿನಿಯಮವು ಹಿಂದಿನ 1971ರ ಸ್ಥಳೀಯ ನಿಧಿ ಕಾಯ್ದೆಯನ್ನು ರದ್ದುಗೊಳಿಸಿತು. ತತ್ಪರಿಣಾಮವಾಗಿ ಹೊಸ ಸ್ಥಳೀಯ ಸಂಸ್ಥೆಗಳು ಪ್ರಾರಂಭಗೊಂಡವು. ಈ ಕಾಯ್ದೆಯಡಿಯಲ್ಲಿ ಸ್ಥಳೀಯ ಸಂಸ್ಥೆಗಳ ಸಂಪೂರ್ಣ ನಿಯಂತ್ರಣವು ಸರ್ಕಾರದ ವಶವಾಯಿತು. ಈ ಹಿಂದಿನ ಕಂದಾಯ ಮಂಡಳಿಗಳು ವಿಸರ್ಜಿಸಲ್ಪಟ್ಟವು. ನಂತರ ಪ್ರತಿ ಕಂದಾಯ ಜಿಲ್ಲೆಗೊಂದರಂತೆ ಜಿಲ್ಲಾ ಮಂಡಳಿಗಳು ಅಸ್ತಿತ್ವಕ್ಕೆ ಬಂದವು. ಈ ಅಭಿವೃದ್ಧಿ ಕಾಯ್ದೆಯ ಪ್ರಕಾರ ಜಿಲ್ಲಾ ಮಂಡಳಿಗಳು, ತಾಲೂಕು ಮಂಡಳಿಗಳು, ಪಂಚಾಯತ್ ಮಂಡಳಿಗಳು, ಸ್ಥಳೀಯ ಮಂಡಳಿಗಳ ಕಾಯ್ದೆ 1920 ಮತ್ತು 1926 ರ ಗ್ರಾಮ ಪಂಚಯತ್ ಕಾಯ್ದೆಯು ಅನುಷ್ಠಾನಗೊಂಡಿರುತ್ತದೆ. 1930ರ ಸ್ಥಳೀಯ ಮಂಡಳಿಗಳ ತಿದ್ದುಪಡಿ ಕಾಯ್ದೆಯ ಪ್ರಕಾರ ಜಿಲ್ಲಾ ಮಂಡಳಿ ಮತ್ತು ತಾಲೂಕು ಮಂಡಳಿಗಳ ಅಧ್ಯಕ್ಷರು ಗ್ರಾಮ ಪಂಚಾಯತ್ ಚಟುವಟಿಕೆಗಳನ್ನು ನಿಯಂತ್ರಿಸುವ ಅಧಿಕಾರ ಹೊಂದಿದ್ದರು ಮತ್ತು ಗ್ರಾಮಾಭಿವೃದ್ಧಿ ನಿಧಿಯನ್ನು ಸ್ಥಾಪಿಸಲಾಯಿತು.

1953ರಲ್ಲಿ ಡಿ.ಎಚ್.ಚಂದ್ರಶೇಖರಯ್ಯ ವಿಚಾರಣಾ ಸಮಿತಿಯ ಸ್ಥಳಿಯಾಡಳಿತ ಸಂಸ್ಥೆಗಳ ಪುನರ್‍ತ್ಥಾನಕ್ಕೆ ಈ ಕೆಳಗಿನ ಸಲಹೆಗಳನ್ನು ಕೊಟ್ಟಿತು,

1. ತಾಲೂಕು ಮಂಡಳಿಗಳ ಸದಸ್ಯರನ್ನುಳ್ಳ ಜಿಲ್ಲಾ ಮಂಡಳಿಗಳನ್ನು ಮುಂದುವರೆಸುವುದು
2. ತಾಲೂಕು ಮಂಡಳಿಯ ಸದಸ್ಯ ಸ್ಥಾನಗಳ ಮೂರನೇ ಒಂದು ಭಾಗವನ್ನು ಗ್ರಾಮ ಪಂಚಾಯತ್ ಮತ್ತು ಪುರಸಭಾ ಮಂಡಳಿಗಳ ಸದಸ್ಯರಿಗೆ ಕಾಯ್ದಿರಿಸಿ ಉಳಿದ ಮೂರನೇ ಎರಡು ಭಾಗದ ಸ್ಥಾನಗಳಿಗೆ ಸದಸ್ಯರನ್ನು ಚುನಾವಣೆಗಳಲ್ಲಿ ಆಯ್ಕೆ ಮಾಡುವುದು.

1956ರಲ್ಲಿ–ರಾಜ್ಯ ಪುನರ್ ವಿಂಗಡಣೆಯ ನಂತರ ಸ್ಥಳೀಯಾಡಳಿತ ಸಂಸ್ಥೆಗಳಲ್ಲಿ ಅನೇಕ ಬೆಳವಣಿಗೆಗಳು ಕಂಡು ಬಂದವು.

ಸ್ಥಳೀಯ ಸ್ವಯಂಮಾಡಳಿತ ಸಂಸ್ಥೆಗಳು ಜನಪರ ಕೆಲಸ ಕಾರ್ಯಗಳನ್ನು ನಿರ್ವಹಿಸುವಾಗ ಜನರ ಸಹಭಾಗಿತ್ವದ ಅನಿವಾರ್ಯತೆಯುಂಟಾಯಿತು.

ಜಿಲ್ಲೆಯಲ್ಲಿ ರಚಿತವಾಗಿದ್ದ ಹಿಂದಿನ ಜಿಲ್ಲಾ ಮಂಡಳಿಗಳನ್ನು ರದ್ದುಗೊಳಿಸಿ 1956ರ ಕರ್ನಾಟಕ ಗ್ರಾಮ ಪಂಚಾಯತ್‌ಗಳ ಹಾಗೂ ಸ್ಥಳೀಯ ಮಂಡಳಿಗಳು ಕಾಯ್ದೆಯ ಪ್ರಕಾರ 1960ರಲ್ಲಿ ಎಲ್ಲಾ ಜಿಲ್ಲೆಗಳಂತೆ ದಕ್ಷಿಣಕನ್ನಡ ಜಿಲ್ಲೆಯಲ್ಲಿಯೂ ಜಿಲ್ಲಾ ಅಭಿವೃದ್ಧಿ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ತನ್ನ ಅಧೀನದಲ್ಲಿದ್ದ ಇತರ ಸ್ಥಳೀಯ ಸಂಸ್ಥೆಗಳಾದ ತಾಲೂಕು ಅಭಿವೃದ್ಧಿ ಮಂಡಳಿ, ಗ್ರಾಮ ಪಂಚಾಯತ್‌ಗಳು ಮತ್ತು ಪಟ್ಟಣ ಪಂಚಾಯತ್‌ಗಳ ಚಟುವಟಿಕೆಗಳ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನದ ಜವಾಬ್ದಾರಿ ಹೊಂದಿದ್ದಿತು. ಜಿಲ್ಲಾಧಿಕಾರಿಗಳು ಪದನಿಮಿತ್ತ ಅಧ್ಯಕ್ಷರಾಗಿದ್ದು ಈ ಸಮಿತಿಗೆ ಜಿಲ್ಲಾ ಅಭಿವೃದ್ಧಿ ಸಹಾಯಕರು ಕಾರ್ಯದರ್ಶಿಯಾಗಿರುತ್ತಾರೆ. ಸದಸ್ಯರಾಗಿ ಜಿಲ್ಲೆಯ ಲೋಕಸಭಾ, ರಾಜ್ಯಸಭಾ, ವಿಧಾನಸಭಾ ಸದಸ್ಯರು ಜಿಲ್ಲೆಯ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳು ಸದಸ್ಯರಾಗಿದ್ದರು. ಅಲ್ಲದೆ ಒಬ್ಬ ಮಹಿಳೆ ಮತ್ತು ಪರಿಶಿಷ್ಟ ವರ್ಗ ಮತ್ತು ಜಾತಿಯ ಪ್ರತಿನಿಧಿಗಳು ಈ ಸಭೆಗೆ ನಾಮಕರಣಗೊಂಡ ಸದಸ್ಯರಾಗಿರುತ್ತಾರೆ. ಈ ಸಮಿತಿಯ ಪ್ರಮುಖ ಕಾರ್ಯವೆಂದರೆ ತಾಲೂಕು ಅಭಿವೃದ್ಧಿ ಮಂಡಳಿಗಳ ಆಯವ್ಯಯವನ್ನು ಪರಿಶೀಲಿಸಿ ಅನುಮೋದಿಸಿ, ಮಂಜೂರಾತಿ ನೀಡುವುದು. ಅವುಗಳ ಕಾರ್ಯಗಳಲ್ಲಿ ಮಾರ್ಗದರ್ಶನ ಮತ್ತು ಪರಾಮರ್ಶೆ ಮಾಡುವುದಾಗಿದೆ.

## ಸ್ಥಳೀಯ ಸಂಸ್ಥೆಗಳ ಸ್ವರೂಪ

ರಾಜ್ಯದಲ್ಲಿನ ನಗರ ಸ್ಥಳೀಯ ಸಂಸ್ಥೆಗಳನ್ನು ಏಕರೂಪದ ನಿಯಮಾವಳಿಗಳಿಗೊಳಪಡಿಸುವ ಸಲುವಾಗಿ ಭಾರತ ಸಂವಿಧಾನಕ್ಕೆ 74ನೇ ತಿದ್ದುಪಡಿಯನ್ನು ತರಲಾಯಿತು. ಕೆಳಹಂತದಿಂದಲೇ ಜನತೆಯನ್ನು ಆಡಳಿತದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು ಸರ್ಕಾರದ ಉದ್ದೇಶವಾಗಿದೆ. 1964ರ ಕರ್ನಾಟಕ ಪುರಸಭೆಗಳ ಅಧಿನಿಯಮಕ್ಕೆ 1994ರ 35ನೇ ಪರಿಚ್ಛೇದದಲ್ಲಿ ಸೂಕ್ತ ತಿದ್ದುಪಡಿ ತರಲಾಗಿದೆ. ಅದರನ್ವಯ 1936ರ ಕರ್ನಾಟಕ ಮಹಾನಗರ ಪಾಲಿಕೆ ಅಧಿನಿಯಮಕ್ಕೂ ತಿದ್ದುಪಡಿ ತಂದು ಪುರಸಭೆ/ನಗರಸಭೆ/ನಗರಪಾಲಿಕೆಗಳ ಕಾರ್ಯ ವೈಖರಿಯಲ್ಲಿ ಪರಿಣಾಮಕಾರಿ ಬದಲಾವಣೆಗಳನ್ನು ತರಲಾಗಿದೆ. ಸರ್ಕಾರ ನಗರ ಸ್ಥಳೀಯ ಸಂಸ್ಥೆಗಳನ್ನು ದೊಡ್ಡನಗರ ಪ್ರದೇಶಗಳು, ಸಣ್ಣನಗರ ಪ್ರದೇಶಗಳು ಮತ್ತು ಪರಿವರ್ತನಾಶೀಲಾ ಪ್ರದೇಶಗಳು ಎಂಬುದಾಗಿ ವಿಂಗಡಿಸಿದೆ. ಈ ನಿರ್ದಿಷ್ಟ ವಿಂಗಡಣೆಗೆ ಆ ಪ್ರದೇಶದ ಜನಸಂಖ್ಯೆ, ಜನಸಂದ್ರಾಣೆ, ಸ್ಥಳೀಯ ಸಂಸ್ಥೆಗೆ ದೊರಕುವ ರಾಜಸ್ವ. ಕೃಷಿಯೇತರ ಉದ್ಯೋಗ ಲಭ್ಯತೆ ಪ್ರಮಾಣ, ಆರ್ಥಿಕ ಸ್ಥಿತಿಗತಿ ಮತ್ತು ತೆರಿಗೆದಾರರ ಸಂಖ್ಯೆ ಮುಂತಾದವುಗಳು ಆಧಾರವಾಗಿವೆ. 1976ರ ಪರಿಚ್ಛೇದ ಮೂರರನ್ವಯ ನಗರ ಸ್ಥಳೀಯ ಸಂಸ್ಥೆಯ ಪ್ರದೇಶವನ್ನು ದೊಡ್ಡ ನಗರ ಮತ್ತು ಸಣ್ಣ ನಗರ ಪ್ರದೇಶವೆಂದ ವಿಂಗಡನೆಮಾಡಿದ್ದಾರೆ. ಈ ಅಧಿನಿಯಮದ ಅಂಶಗಳನ್ನು ಪರಿಗಣಿಸಿ ಸ್ಥಳೀಯ ಪ್ರಾಧಿಕಾರದೊಂದಿಗೆ ಸಮಾಲೋಚನೆ ಮಾಡಿದ ತರುವಾಯ ರಾಜ್ಯಪಾಲರು ದೊಡ್ಡ ಮತ್ತು ಸಣ್ಣ ನಗರವೆಂದು ಉದ್ಘೋಷಿಸುತ್ತಾರೆ. ಇಂತಹ ದೊಡ್ಡ ನಗರ ಪ್ರದೇಶವನ್ನು ಮಹಾನಗರ ಪಾಲಿಕೆಯೆಂದು ಮತ್ತು ಸಣ್ಣ ನಗರ ಪ್ರದೇಶದ ಜನಸಂಖ್ಯೆ 50,000 ಮೀರಿದಲ್ಲಿ ನಗರಸಭೆಯೆಂದು ಕಡಿಮೆ ಇದ್ದಲ್ಲಿ ಪುರಸಭೆಯೆಂದೂ ಕರೆಯಲಾಗುತ್ತದೆ.

ಅದೇ ರೀತಿಯಲ್ಲಿ 1964ರ ಕರ್ನಾಟಕದ ಪುರಸಭೆಯ ಅಧಿನಿಯಮದ ಪರಿಚ್ಛೇದ 346ರಂತೆ ಪರಿವರ್ತನಾಶೀಲ ಪ್ರದೇಶವೆಂದು ಪರಿಗಣಿಸಲು ಆ ಪ್ರದೇಶದ ಜನಸಂಖ್ಯೆಯು 30,000 ಕ್ಕಿಂತ ಕಡಿಮೆ

ಇದ್ದು 10,000 ಕ್ಕಿಂತ ಹೆಚ್ಚಾಗಿರಬೇಕು ಮತ್ತು ಆ ಪ್ರದೇಶದ ಜನಸಾಂದ್ರತೆಯು ಪ್ರತಿ ಚ.ಕಿ.ಮೀ 400ಕ್ಕಿಂತ ಹೆಚ್ಚು ಇರಬೇಕು ಹಾಗೂ ಕೃಷಿಯೇತರ ಉದ್ಯೋಗದ ಶೇ.ಪ್ರಮಾಣ ಒಟ್ಟು ಉದ್ಯೋಗದ ಶೇ.60 ರಷ್ಟಿರಬೇಕು. ಈ ಅಂಶಗಳನ್ನು ಮನಗಂಡು ರಾಜ್ಯಪಾಲರು ಪಟ್ಟಣ ಪಂಚಾಯತ್ ಎಂದು ಉದ್ಘೋಷಿಸುತ್ತಾರೆ. ಅದೇ ತರದಲ್ಲಿ ತಾಲೂಕು ಕೇಂದ್ರಗಳಲ್ಲಿ ಜನಸಂಖ್ಯೆ 10,000ಕ್ಕಿಂತ ಕಡಿಮೆ ಇದ್ದರೂ ಅದನ್ನು ಪಟ್ಟಣ ಪಂಚಯತ್ ಎಂದು ಪರಿಗಣಿಸಲಾಗಿದೆ. ಈಗ ದ.ಕ.ಜಿಲ್ಲೆಯಲ್ಲಿರುವ ಸ್ಥಳೀಯ ಸಂಸ್ಥೆಗಳ ಸ್ವರೂಪವನ್ನು ಕೋಷ್ಟಕ 3.10 ರಲ್ಲಿ ಗಮನಿಸಬಹುದು.

**ಕೋಷ್ಟಕ-3.10: ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ಸ್ವರೂಪ**

| ತಾಲೂಕು | ಗ್ರಾಮ ಪಂಚಾಯತ್ | ಮಹಾನಗರ ಪಾಲಿಕೆ | ನಗರಸಭೆ | ಪುರಸಭೆ | ನಗರ ಪಂಚಾಯತ್ |
|---|---|---|---|---|---|
| ಬಂಟ್ವಾಳ | 47 | 0 | 0 | 1 | 0 |
| ಬೆಳ್ತಂಗಡಿ | 43 | 0 | 0 | 0 | 1 |
| ಮಂಗಳೂರು | 49 | 1 | 0 | 2 | 1 |
| ಪುತ್ತೂರು | 37 | 0 | 0 | 1 | 0 |
| ಸುಳ್ಯ | 27 | 0 | 0 | 0 | 1 |
| ಒಟ್ಟು | 203 | 1 | 0 | 4 | 3 |

**ಮೂಲ:** *ದಕ್ಷಿಣ ಕನ್ನಡ ಆಡಳಿತ ವರದಿ*

ಈ ಕೋಷ್ಟಕದಿಂದ ಒಟ್ಟಾಗಿ 203 ಸ್ಥಳೀಯ ಸಂಸ್ಥೆಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುವುದನ್ನು ನೋಡಬಹುದಾಗಿದೆ. ಅವುಗಳನ್ನು ಗ್ರಾಮ ಪಂಚಾಯತ್, ಮಹಾನಗರಪಾಲಿಕೆ, ನಗರಸಭೆ, ಪುರಸಭೆ, ನಗರಪಂಚಾಯತ್ ಎಂದು ಐದು ತಾಲೂಕುಗಳಲ್ಲಿವಿಂಗಡಣೆ ಮಾಡಲಾಗಿದೆ.

## ಪಂಚಾಯತ್ ರಾಜ್ ವ್ಯವಸ್ಥೆ

ದಕ್ಷಿಣಕನ್ನಡ ಜಿಲ್ಲೆಯಲ್ಲೂ ಪಂಚಯತ್ ರಾಜ್ ವ್ಯವಸ್ಥೆ ಮೂರು ಹಂತಗಳಲ್ಲಿ ಸ್ಥಳೀಯ ಅಭಿವೃದ್ಧಿಗೆ ಕಾರ್ಯನಿರತವಾಗಿದೆ. ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳು ಜಿಲ್ಲೆಯ ಗ್ರಾಮೀಣ ಅಭಿವೃದ್ಧಿಗೆ, ವಿಕೇಂದ್ರಿಕೃತ ತತ್ತ್ವದಡಿಯಲ್ಲಿ ಕಾರ್ಯನಿರ್ವಹಿಸುತ್ತಿದೆ.

## ಜಿಲ್ಲಾ ಪಂಚಾಯತ್

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ 1993ರ ಕರ್ನಾಟಕ ಪಂಚಾಯತ್ ಕಾಯ್ದೆಯಂತೆ 1995ರಲ್ಲಿ ಸ್ಥಾಪನೆಗೊಂಡಿತು. ಅಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಂಟು ತಾಲೂಕುಗಳಿಂದ 55 ಮಂದಿ ಚುನಾಯಿತ ಸದಸ್ಯರಿದ್ದರು. ನಂತರ 1998ರಲ್ಲಿ ಆಡಳಿತ ಹಿತದೃಷ್ಟಿಯಿಂದ ಕುಂದಾಪುರ, ಕಾರ್ಕಳ ಮತ್ತು ಉಡುಪಿ ತಾಲೂಕುಗಳನ್ನೊಳಗೊಂಡ ಉಡುಪಿ ಜಿಲ್ಲೆಯು ಪ್ರತ್ಯೇಕವಾಗಿ ಅಸ್ತಿತ್ವಗೊಂಡಿತು. ಇಂದಿನ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇರುವ ಐದು ತಾಲೂಕುಗಳೆಂದರೆ ಮಂಗಳೂರು, ಬೆಳ್ತಂಗಡಿ, ಬಂಟ್ವಾಳ, ಪುತ್ತೂರು ಹಾಗೂ ಸುಳ್ಯ.

ದಕ್ಷಿಣಕನ್ನಡ ಜಿಲ್ಲಾ ಪಂಚಾಯತ್ ಆಶ್ರಯದಲ್ಲಿ ನಡೆಯುವ ಅನೇಕ ಕಾರ್ಯಕ್ರಮ, ಯೋಜನೆಗಳನ್ನು ಜಿಲ್ಲೆಯ ಐದು ತಾಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್ ಹಲವು ಇಲಾಖೆಗಳ ಮೂಲಕ ನಿರ್ವಹಿಸುತ್ತವೆ ಹಾಗೂ ಕೆಲವು ಕಾರ್ಯಕ್ರಮಗಳನ್ನು ಜಿಲ್ಲಾ ಪಂಚಾಯತೇ ಕೈಗೊಳ್ಳುತ್ತಿದೆ. ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಪಾಲಿಕೆ, ಪುರಸಭೆಗಳ ವ್ಯಾಪ್ತಿಯ ಹೊರತಾಗಿಯೂ 7,99,205 ಹೆಕ್ಟೇರುಗಳ ಗ್ರಾಮಾಂತರ ಪ್ರದೇಶವಿದೆ. ಈ ಗ್ರಾಮಂತರ ಪ್ರದೇಶಗಳಿಗೆ ಸ್ಥಾಯಿ ಸಮಿತಿಗಳು ಕಾರ್ಯ ನಿರ್ವಹಸುತ್ತದೆ ಅವುಗಳೆಂದರೆ;

1. ಸಾಮಾನ್ಯ ಸ್ಥಾಯಿ, ಸಮಿತಿ
2. ಹಣಕಾಸು, ಲೆಕ್ಕಪರಿಶೋಧನೆ ಮತ್ತು ಯೋಜನಾ ಸಮಿತಿ
3. ಸಾಮಾಜಿಕ ನ್ಯಾಯ ಸಮಿತಿ, ಇದು ಸಮಾಜ ಕಲ್ಯಾಣ ಇಲಾಖೆ
4. ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖೆ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳ ಉಸ್ತುವಾರಿ ವಹಿಸುತ್ತದೆ.
5. ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ
6. ಕೃಷಿ ಮತ್ತು ಕೈಗಾರಿಕಾ ಸಮಿತಿ

ಈ ಸ್ಥಾಯಿ ಸಮಿತಿಗಳಲ್ಲಿ ಅಧ್ಯಕ್ಷರು ಸೇರಿದಂತೆ ಒಟ್ಟು ಏಳು ಮಂದಿ ಸದಸ್ಯರಿರುತ್ತಾರೆ. ದ.ಕ.ಜಿಲ್ಲೆಯಲ್ಲಿ ಒಟ್ಟು 35 ಜಿಲ್ಲಾ ಪಂಚಾಯತ್ ಸದಸ್ಯರು ವಿವಿಧ ವರ್ಗಗಳನ್ನು ಪ್ರತಿನಿಧಿಸುತ್ತಾರೆ. ಈ ವಿವರವನ್ನು ಕೋಷ್ಟಕ 3.11 ರಲ್ಲಿ ಗಮನಿಸಬಹುದು.

**ಕೋಷ್ಟಕ– 3.11: ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಪಂಚಾಯತ್ ಚುನಾಯಿತ ಸದಸ್ಯರು**

| ತಾಲೂಕು | ಒಟ್ಟು | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಹಿಂದುಳಿದ ವರ್ಗ | | | ಸಾಮಾನ್ಯ | | |
|---|---|---|---|---|---|---|---|---|---|---|---|---|---|---|---|
| | ಗಂ | ಹೆಂ | ಒಟ್ಟು | ಗಂ | ಹೆಂ | ಒಟ್ಟು | ಗಂ | ಹೆಂ | ಒಟ್ಟು | ಗಂ | ಹೆಂ | ಒಟ್ಟು | ಗಂ | ಹೆಂ | ಒಟ್ಟು |
| ಬಂಟ್ವಾಳ | 4 | 5 | 9 | – | 1 | 1 | – | – | – | 4 | 3 | 7 | – | 1 | 1 |
| ಬೆಳ್ತಂಗಡಿ | 2 | 4 | 6 | – | 1 | 1 | 1 | 1 | 2 | 1 | 1 | 2 | – | 2 | 2 |
| ಮಂಗಳೂರು | 6 | 4 | 10 | – | – | – | – | – | – | 3 | 1 | 4 | 3 | 3 | 6 |
| ಪುತ್ತೂರು | 3 | 3 | 6 | 1 | – | 1 | – | 1 | 1 | 1 | 1 | 2 | 1 | 1 | 2 |
| ಸುಳ್ಯ | 2 | 2 | 4 | – | – | – | – | – | – | – | 1 | 1 | 2 | 1 | 3 |
| ಒಟ್ಟು | 17 | 18 | 35 | 1 | 2 | 3 | 1 | 1 | 3 | 9 | 7 | 16 | 6 | 8 | 14 |

*ಮೂಲ: ವಾರ್ಷಿಕ ಆಡಳಿತ ವರದಿ ಜಿ.ಪಂ.ದ.ಕ.* ( ಗಂ= ಗಂಡಸರು ; ಹೆಂ= ಹೆಂಗಸರು)

ಜಿಲ್ಲೆಯ ಜಿಲ್ಲಾ ಪಂಚಾಯತ್ ಸದಸ್ಯರಲ್ಲಿ ಸುಮಾರು ಶೇ.50.0ಕ್ಕಿಂತಲೂ ಹೆಚ್ಚು ಮಹಿಳೆಯರು ಆಗಿರುತ್ತಾರೆ. ಇದು ಗಮನಿಸಬೇಕಾದ ಅಂಶ.ದ.ಕ.ಜಿಲ್ಲಾ.ಪಂಚಾಯತ್ ಯೋಜನೆ ಜಿಲ್ಲೆಯ ಯೋಜನೆಯನ್ನು ಕೋಷ್ಟಕದ 3.12ರಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ –3.12: ದ.ಕ.ಜಿಲ್ಲಾ.ಪಂಚಾಯತ್ ಯೋಜನೆ**

| ವಲಯ | ಸರಕಾರದಿಂದ ಬಿಡುಗಡೆಯಾದ | ಮಾರ್ಚ್ 2010ರ ವರೆಗೆ ವೆಚ್ಚ | ಶೇಕಡಾವಾರು ಪ್ರಗತಿ |
|---|---|---|---|
| ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು | 37.364 | 37.37 | 100 |
| ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅನುದಾನ | 1343.22 | 1343.20 | 100 |
| ಸಣ್ಣ ನೀರಾವರಿ | 10.39 | 10.39 | 100 |
| ಗ್ರಾಮೋದ್ಯಮ ಮತ್ತು ಸಣ್ಣ ಪುಟ್ಟ ಉದ್ಯಮ | 9.49 | 9.47 | 99.79 |
| ರೇಷ್ಮೆ | 5.93 | 5.66 | 95.42 |
| ರಸ್ತೆ ಮತ್ತು ಸೇತುವೆಗಳು | 177.83 | 177.38 | 99.75 |
| ಸಚಿವಾಲಯ ಆರ್ಥಿಕ ಸೇವೆಗಳು | 7.73 | 7.64 | 98.83 |
| ಗಿರಿಜನ ಉಪಯೋಜನೆ | 62.26 | 61.71 | 99.11 |
| ಕೈಮಗ್ಗ | 2.03 | 2.03 | 100 |
| ವಿಜ್ಞಾನ ಮತ್ತು ತಂತ್ರಜ್ಞಾನ | 4.05 | 4.05 | 100 |
| ಕಲೆ ಮತ್ತು ಸಂಸ್ಕೃತಿ ಹಾಗೂ ಗ್ರಂಥಾಲಯ | 53.99 | 53.99 | 100 |
| ವಸತಿ ಯೋಜನೆ | 1386.98 | 1207.52 | 87.06 |
| ಉದ್ಯೋಗ ಮತ್ತು ತರಬೇತಿ | 2.67 | 2.44 | 91.30 |
| ಜಲನಯನ ಅಭಿವೃದ್ಧಿ | 231.932 | 218.41 | 94.17 |
| ಅಲ್ಪ ಸಂಖ್ಯಾತರ ಕಲ್ಯಾಣ | 80.45 | 75.32 | 93.62 |

**ಮೂಲ:** *ಮುಖ್ಯ ಯೋಜನಾಧಿಕಾರಿ ದ.ಕ.ಜಿಲ್ಲಾ ಪಂಚಾಯತ್, ಮಂಗಳೂರು*

ದಕ್ಷಿಣಕನ್ನಡ ಜಿಲ್ಲೆಯ ಜಿಲ್ಲಾ ಪಂಚಾಯತ್ ಯೋಜನೆಯಲ್ಲಿ ವಿವಿಧ ವಲಯಗಳ ಅಭಿವೃಧಿಯನ್ನು ಗಮನಿಸಬಹುದಾಗಿದೆ. ಈ ಯೋಜನೆಗಳಿಗೆ ಸರ್ಕಾರದಿಂದ ಬಿಡುಗಡೆಯಾದ ಅನುದಾನ, 2010 ಮಾರ್ಚ್‌ರವರೆಗೆ ವೆಚ್ಚ ಮತ್ತು ಶೇಕಡಾವಾರು ಪ್ರಗತಿಯನ್ನು ನೋಡಬಹುದಾಗಿದೆ. ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅನುದಾನ, ಸಣ್ಣ ನೀರಾವರಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೈಮಗ್ಗ, ಕಲೆ ಮತ್ತು ಸಂಸ್ಕೃತಿ ಹಾಗೂ ಗ್ರಂಥಾಲಯವು ಶೇ.100.00ರಷ್ಟು ಪ್ರಗತಿಕಂಡಿರುವುದನ್ನು ನೋಡಬಹುದಾಗಿದೆ. ಬೇರೆ ವಲಯದಲ್ಲಿ ಶೇ.90.00 ರ ಅಭಿವೃದ್ಧಿಯನ್ನು ಕಾಣಬಹುದಾಗಿದೆ.ದ.ಕ.ಜಿಲ್ಲೆಯ ಜಿಲ್ಲಾ ಪಂಚಾಯತ್ ಸದಸ್ಯರಲ್ಲಿ ಸುಮಾರು ಶೇ.50.0 ಕ್ಕಿಂತಲೂ ಹೆಚ್ಚು ಮಹಿಳೆಯರು ಆಗಿರುತ್ತಾರೆ. ಇದು ಗಮನಿಸಬೇಕಾದ ಅಂಶ. ದಕ್ಷಿಣ ಕನ್ನಡ ಜಿಲ್ಲೆಯ ವಲಯ ಯೋಜನೆಗಳನ್ನು ಕೋಷ್ಠಕ 3.13ರಲ್ಲಿ ಗಮನಿಸಬಹುದಾಗಿದೆ

**ಕೋಷ್ಟಕ-3.13: ದಕ್ಷಿಣ ಕನ್ನಡ ಜಿಲ್ಲೆಯ ವಲಯ ಯೋಜನೆಯಲ್ಲಿ ಸಾಧಿಸಿದ ಪ್ರಗತಿ**

| ಇಲಾಖೆಗಳು | ಸಂಚಿತ ಆರ್ಥಿಕ ಪ್ರಗತಿ (ರೂ.ಲಕ್ಷಗಳಲ್ಲಿ) | | | | | |
|---|---|---|---|---|---|---|
| | ಅನುದಾನ (ರೂ.ಗಳಲ್ಲಿ) | ಅನುದಾನ ಜಿಲ್ಲಾ ಪಂಚಾಯತ್ ಬಿಡುಗಡೆಯಾದ (ರೂ.ಗಳಲ್ಲಿ) | ಗುರಿ (ರೂ.ಗಳಲ್ಲಿ) | ಸಾಧನೆ (ರೂ.ಗಳಲ್ಲಿ) | ಸಂಚಿತ ಗುರಿಗೆ ಶೇಕಡ ಸಾಧನೆ | ಬಿಡುಗಡೆಯಾದ ಅನುದಾನಕ್ಕೆ ಶೇಕಡ ಸಾಧನೆ |
| ಪ್ರಾಥಮಿಕ ಮತ್ತು ಸೆಕೆಂಡರಿ ಶಿಕ್ಷಣ | 3772.29 | 3598.36 | 2747.08 | 3518.67 | 97.79 | 128.09 |
| ಲೋಕ ಶಿಕ್ಷಣ | 5.00 | 5.00 | 5.00 | 5.00 | 100.00 | 100.00 |
| ಕ್ರೀಡೆ ಮತ್ತು ಯುವಜನ ಸೇವೆಗಳು | 25.63 | 25.63 | 25.63 | 25.54 | 99.65 | 99.65 |
| ವೈದ್ಯಕೀಯ | 186.73 | 184.60 | 186.73 | 163.17 | 88.39 | 87.38 |
| ಭಾರತೀಯ ವೈದ್ಯ ಪದ್ಧತಿ | 30.00 | 30.00 | 30.00 | 23.65 | 78.85 | 78.85 |
| ಕುಟುಂಬ ಕಲ್ಯಾಣ | 1267.35 | 1267.35 | 1267.35 | 1107.14 | 87.36 | 87.36 |
| ಗ್ರಾಮೀಣ ನೀರು ಸರಬರಾಜು | 76.01 | 32.00 | 32.00 | 32.00 | 100.00 | 100.00 |
| ಸಮಾಜ ಕಲ್ಯಾಣ (ಪ.ಜಾ) | 372.13 | 362.47 | 371.99 | 325.51 | 89.80 | 87.51 |
| ಸಮಾಜ ಕಲ್ಯಾಣ (ಪ.ಪಂ) | 229.84 | 227.24 | 254.53 | 193.35 | 85.08 | 75.96 |
| ವಿಶೇಷ ಘಟಕ ಯೋಜನೆ | 84.89 | 84.89 | 84.93 | 84.72 | 99.80 | 99.76 |
| ಹಿಂದುಳಿದ ವರ್ಗಗಳ ಕಲ್ಯಾಣ | 382.66 | 382.66 | 382.66 | 372.50 | 97.34 | 97.34 |
| ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ | 1631.96 | 1592.78 | 1538.50 | 1397.82 | 87.76 | 90.86 |
| ಕೃಷಿ | 130.17 | 124.90 | 130.17 | 123.02 | 99.63 | 94.51 |
| ತೋಟಗಾರಿಕೆ | 33.05 | 33.05 | 33.05 | 32.89 | 99.54 | 99.54 |
| ಪಶು ಸಂಗೋಪನೆ | 186.97 | 192.67 | 213.94 | 182.90 | 94.93 | 85.49 |
| ಮೀನುಗಾರಿಕೆ | 41.82 | 41.82 | 27.28 | 41.68 | 99.68 | 152.81 |
| ಪೌಷ್ಟಿಕ ಆಹಾರ | 1239.00 | 1239.00 | 1546.11 | 1044.04 | 84.23 | 67.53 |
| ಅರಣ್ಯ | 11.00 | 6.50 | 11.00 | 5.00 | 76.92 | 45.45 |
| ಸಹಕಾರ | 35.37 | 35.37 | 35.37 | 35.37 | 100.00 | 100.00 |
| ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು | 650.50 | 596.51 | 666.80 | 521.08 | 93.93 | 70.03 |
| ಸಣ್ಣ ನೀರಾವರಿ (ಜಿ.ಪಂ.) | 10.39 | 10.39 | 10.39 | 10.39 | 100.00 | 100.00 |

| ಗ್ರಾಮೋದ್ಯಮ ಮತ್ತು ಸಣ್ಣ ಉದ್ದಿಮೆಗಳು | 10.49 | 10.49 | 10.49 | 10.39 | 99.05 | 99.05 |
|---|---|---|---|---|---|---|
| ರೇಷ್ಮೆ | 5.93 | 5.93 | 5.93 | 5.64 | 95.11 | 95.11 |
| ಕೈಮಗ್ಗ | 2.03 | 2.03 | 2.03 | 2.03 | 100.00 | 100.00 |
| ರಸ್ತೆ ಮತ್ತು ಸೇತುವೆಗಳು | 10.64 | 10.64 | 12.71 | 10.61 | 99.77 | 83.50 |
| ಜಿಲ್ಲಾ ಯೋಜನಾ ಘಟಕ | 1318.24 | 1229.94 | 1348.58 | 964.96 | 88.25 | 71.55 |
| ಸಚಿವಾಲಯ ಆರ್ಥಿಕ ಸೇವೆಗಳು | 8.90 | 8.90 | 8.90 | 5.071 | 56.98 | 56.98 |
| ಕೈಮಗ್ಗ | 2.03 | 2.03 | 2.03 | 2.03 | 100.00 | 100.00 |
| ಗಿರಿಜನ ಉಪಯೋಜನೆ | 62.27 | 62.27 | 62.47 | 61.46 | 98.70 | 98.38 |
| ಕಲೆ ಸಂಸ್ಕೃತಿ ಮತ್ತು ಗ್ರಂಥಾಲಯ | 2.00 | 2.00 | 2.00 | 2.00 | 100.00 | 100.00 |
| ವಸತಿ | 199.10 | 262.32 | 233.53 | 191.23 | 72.90 | 81.78 |
| ಜಲಾನಯನ ಅಭಿವೃದ್ಧಿ | 137.51 | 100.77 | 202.075 | 78.96 | 78.35 | 39.08 |
| ಅಲ್ಪಸಂಖ್ಯಾತರ ಕಲ್ಯಾಣ | 80.45 | 80.45 | 80.45 | 53.03 | 65.93 | 65.93 |
| ವಿಜ್ಞಾನ ಮತ್ತು ತಂತ್ರಜ್ಞಾನ | 4.05 | 4.05 | 4.05 | 3.44 | 85.12 | 85.12 |
| ಉದ್ಯೋಗ ಮತ್ತು ತರಬೇತಿ | 2.67 | 2.67 | 2.67 | 2.66 | 99.73 | 99.73 |
| ಒಟ್ಟು | 12247.00 | 11855.69 | 11575.7 | 10637.03 | 89.72 | 91.88 |

*ಮೂಲ : ಮುಖ್ಯ ಯೋಜನಾಧಿಕಾರಿ, ದ.ಕ.ಜಿಲ್ಲಾ ಪಂಚಾಯತ್, ಮಂಗಳೂರು*

**ಕೋಷ್ಟಕ –3.14: ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕು ಪಂಚಾಯತ್**

| ತಾಲೂಕು | ಒಟ್ಟು | | ಪರಿಶಿಷ್ಟ ಜಾತಿ | | ಪರಿಶಿಷ್ಟಪಂಗಡ | | ಹಿಂದುಳಿದ ವರ್ಗ | | ಸಾಮಾನ್ಯ | |
|---|---|---|---|---|---|---|---|---|---|---|
| | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ |
| ಬಂಟ್ವಾಳ | 15 | 8 | 1 | 1 | – | 1 | 12 | 16 | 2 | – |
| ಬೆಳ್ತಂಗಡಿ | 11 | 13 | 1 | 1 | – | 1 | 4 | 4 | 6 | 7 |
| ಮಂಗಳೂರು | 19 | 18 | 1 | 1 | – | 1 | 8 | 6 | 10 | 10 |
| ಪುತ್ತೂರು | 9 | 13 | 1 | 2 | – | 1 | 3 | 4 | 5 | 6 |
| ಸುಳ್ಯ | 5 | 8 | 1 | 1 | – | 1 | 1 | 2 | 3 | 4 |
| ಒಟ್ಟು (ಗ/ಹೆ) | 59 | 70 | 5 | 6 | – | 1 | 28 | 32 | 26 | 27 |
| ಒಟ್ಟು | 129 | | 11 | | 5 | | 60 | | 53 | |

*ಮೂಲ : ದಕ್ಷಿಣ ಕನ್ನಡ ಆಡಳಿತ ವರದಿ*

ದಕ್ಷಿಣ ಕನ್ನಡ ಗ್ರಾಮ ಪಂಚಾಯತ್‌ನ ಪುರಸಭೆಯ ಸದಸ್ಯರ ವಿವರಗಳನ್ನು ಕೋಷ್ಟಕ 3.15 ರಲ್ಲಿ ಗಮನಿಸಬಹುದು.

**ಕೋಷ್ಟಕ–3.15: ದಕ್ಷಿಣ ಕನ್ನಡ ಜಿಲ್ಲೆಯ ಪುರಸಭೆ**

| ತಾಲೂಕು | ಒಟ್ಟು | | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | | ಹಿಂದುಳಿದ ವರ್ಗ | | ಸಾಮಾನ್ಯ | |
|---|---|---|---|---|---|---|---|---|---|---|
| | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ |
| ಬಂಟ್ವಾಳ | 13 | 10 | -- | 1 | -- | 1 | 5 | 3 | 8 | 5 |
| ಬೆಳ್ತಂಗಡಿ | -- | -- | -- | -- | -- | -- | -- | -- | -- | -- |
| ಮಂಗಳೂರು | 31 | 19 | 1 | 2 | -- | 2 | 19 | 9 | 11 | 6 |
| ಪುತ್ತೂರು | 21 | 11 | -- | 1 | 1 | 1 | 5 | 4 | 15 | 5 |
| ಸುಳ್ಯ | -- | -- | -- | -- | -- | -- | -- | -- | -- | -- |
| ಒಟ್ಟು (ಗ/ಹೆ) | 65 | 40 | 1 | 4 | 1 | 4 | 29 | 16 | 34 | 26 |
| ಒಟ್ಟು | 105 | | 5 | | 5 | | 45 | | 50 | |

ಮೂಲ: ದಕ್ಷಿಣ ಕನ್ನಡ ಆಡಳಿತ ವರದಿ

## ಗ್ರಾಮ ಪಂಚಾಯತ್

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 203 ಗ್ರಾಮ ಪಂಚಾಯತ್‌ಗಳು ಕಾರ್ಯ ನಿರ್ವಹಿಸುವುದನ್ನು ನೋಡಬಹುದಾಗಿದೆ. ಜಿಲ್ಲೆಯ ಗ್ರಾಮ ಪಂಚಾಯತ್ ಸದ್ಯಸರ ವಿವರವನ್ನು ಕೋಷ್ಠ 3.16ರಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ–3.16: ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮ ಪಂಚಾಯತ್ ಸದ್ಯಸರ ವಿವರ**

| ತಾಲೂಕು | ಒಟ್ಟು | | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | | ಹಿಂದುಳಿದ ವರ್ಗ | | ಸಾಮಾನ್ಯ | |
|---|---|---|---|---|---|---|---|---|---|---|
| | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ |
| ಬಂಟ್ವಾಳ | 457 | 376 | 9 | 51 | 11 | 55 | 423 | 265 | 14 | 95 |
| ಬೆಳ್ತಂಗಡಿ | 336 | 282 | 18 | 43 | 5 | 43 | 121 | 84 | 192 | 112 |
| ಮಂಗಳೂರು | 528 | 410 | 16 | 49 | 4 | 48 | 189 | 124 | 319 | 189 |
| ಪುತ್ತೂರು | 312 | 251 | 30 | 39 | 7 | 38 | 111 | 75 | 164 | 99 |
| ಸುಳ್ಯ | 163 | 156 | 18 | 30 | 12 | 28 | 47 | 29 | 86 | 69 |
| ಒಟ್ಟು (ಗ/ಹೆ) | 1796 | 1475 | 91 | 212 | 39 | 212 | 891 | 577 | 775 | 474 |
| ಒಟ್ಟು | 3271 | | 303 | | 251 | | 1468 | | 1249 | |

*ಮೂಲ : ದಕ್ಷಿಣ ಕನ್ನಡ ಆಡಳಿತ ವರದಿ*

ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮ ಪಂಚಾಯತ್‌ನಲ್ಲಿ ಸುಮಾರು 3271 ಚುನಾಯಿತ ಸದಸ್ಯರಿದ್ದು ಮಹಿಳೆಯರ ಪ್ರಮಾಣ (ಶೇ.45.0) ಹೆಚ್ಚಾಗಿಯೆ ಇದೆ. ಸಮಾಜದ ಹಿಂದುಳಿದ ವರ್ಗದ ಜನರ

ಪ್ರತಿನಿಧಿಗಳು ಸಾಕಷ್ಟು ಇದ್ದಾರೆ. (ಪರಿಶಿಷ್ಟ ಜಾತಿ ಶೇ.9.26) ಪರಿಶಿಷ್ಟ ಪಂಗಡ ಶೇ.7.67; ಹಿಂದುಳಿದ ವರ್ಗ–ಶೇ.44.88.

## ನಗರ ಸ್ಥಳೀಯಾಡಳಿತ ಸಂಸ್ಥೆಗಳು

ಪ್ರಜಾಪ್ರಭುತ್ವದ ಮೂಲದಂತೆ ನಗರ ಪ್ರದೇಶದ ಸ್ಥಳೀಯ ಅಭಿವೃದ್ಧಿಗೂ, ಸ್ಥಳೀಯಾಡಳಿತ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ಪುರಸಭೆ, ನಗರ ಪಂಚಯತ್ ಹಾಗೂ ಒಂದು ಮಹಾನಗರ ಪಾಲಿಕೆ ನಗರ ಪ್ರದೇಶದ ಅಭಿವೃದ್ಧಿಗೆ ಕೆಲಸ ಮಾಡುತ್ತದೆ. ಜಿಲ್ಲೆಯಲ್ಲಿ ಇರುವಂತಹ ಮಂಗಳೂರು ಮಹಾನಗರ ಪಾಲಿಕೆಯ ಜನಪ್ರತಿನಿಧಿಗಳ ವಿವರವನ್ನು ಕೋಷ್ಟಕ 3.13 ರಲ್ಲಿ ಗಮನಿಸಬಹುದು.ದಕ್ಷಿಣ ಕನ್ನಡ ಜಿಲ್ಲೆಯ ನಗರ ಪಂಚಯತ್ ಸದಸ್ಯರ ವಿವರಗಳನ್ನು ಕೋಷ್ಟಕ 3.17 ರಲ್ಲಿ ಗಮನಿಸಬಹುದು.

**ಕೋಷ್ಟಕ –3.17: ದಕ್ಷಿಣ ಕನ್ನಡ ಜಿಲ್ಲೆಯ ನಗರ ಪಂಚಾಯತ್**

| ತಾಲೂಕು | ಒಟ್ಟು | | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | | ಹಿಂದುಳಿದ ವರ್ಗ | | ಸಾಮಾನ್ಯ | |
|---|---|---|---|---|---|---|---|---|---|---|
| | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ |
| ಬಂಟ್ವಾಳ | -- | -- | -- | -- | -- | -- | -- | -- | -- | -- |
| ಬೆಳ್ತಂಗಡಿ | 5 | 6 | -- | 1 | -- | 1 | 2 | 3 | 3 | 1 |
| ಮಂಗಳೂರು | 9 | 8 | -- | 1 | -- | 1 | 3 | 3 | 6 | 3 |
| ಪುತ್ತೂರು | -- | -- | -- | -- | -- | -- | -- | -- | -- | -- |
| ಸುಳ್ಯ | 10 | 8 | 1 | 1 | -- | 1 | 2 | 3 | 7 | 3 |
| ಒಟ್ಟು (ಗ/ಹೆ) | 24 | 22 | 1 | 3 | – | 3 | 7 | 9 | 16 | 7 |
| ಒಟ್ಟು | 46 | | 4 | | 3 | | 16 | | 23 | |

*ಮೂಲ: ದಕ್ಷಿಣ ಕನ್ನಡ ಆಡಳಿತ ವರದಿ*

ಜಿಲ್ಲೆಯ ನಗರ ಪಂಚಾಯತ್‌ಯನ್ನು ಗಮನಿಸಿವಾಗ ಶೇ.47.82 ರಷ್ಟು ಹೆಂಗಸರು ಆಡಳಿತದಲ್ಲಿ ಪಾಲುಗೊಳ್ಳುವುದನ್ನು ಕೋಷ್ಟಕ 3.17ರಲ್ಲಿ ನೋಡಬಹುದು. ಈ ಮುಖಾಂತರ ಹೆಂಗಸರು ಕೂಡ ಆಡಳಿತದಲ್ಲಿ ಪಾಲುಗೊಳ್ಳುತ್ತ ಅಭಿವೃದ್ಧಿಯ ವರಸೆಗೆ ತಮ್ಮ ಪಾಲನ್ನು ನೀಡುವುದನ್ನು ಗಮನಿಸಬಹುದು.

ಮಹಾನಗರ ಪಾಲಿಕೆಯ ಚುನಾಯಿತ ಸದಸ್ಯರ ವಿವರವನ್ನು ಕೋಷ್ಟಕ 3.18ರಲ್ಲಿ ಗಮನಿಸಬಹುದಾಗಿದೆ

**ಕೋಷ್ಟಕ –3.18: ಮಹಾನಗರಪಾಲಿಕೆಯ ಚುನಾಯಿತ ಸದಸ್ಯರು (2009–2013)**

| ತಾಲೂಕು | ಒಟ್ಟು (60) | | ಪರಿಶಿಷ್ಟ ಜಾತಿ (4) | | ಪರಿಶಿಷ್ಟ ಪಂಗಡ (1) | | ಹಿಂದುಳಿದ ವರ್ಗ | | ಸಾಮಾನ್ಯ (4) | |
|---|---|---|---|---|---|---|---|---|---|---|
| | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ | ಗಂ | ಹೆಂ |
| ಬಂಟ್ವಾಳ | -- | -- | -- | -- | -- | -- | -- | -- | -- | -- |
| ಬೆಳ್ತಂಗಡಿ | -- | -- | -- | -- | -- | -- | -- | -- | -- | -- |
| ಮಂಗಳೂರು | 36 | 24 | 1 | 3 | -- | 1 | 33 | 18 | 2 | 2 |
| ಪುತ್ತೂರು | -- | -- | -- | -- | -- | -- | -- | -- | -- | -- |
| ಸುಳ್ಯ | -- | -- | -- | -- | -- | -- | -- | -- | -- | -- |
| ಒಟ್ಟು | 36 | 24 | 1 | 3 | 0 | 1 | 33 | 18 | 2 | 2 |

**ಮೂಲ:** ದಕ್ಷಿಣ ಕನ್ನಡ ಆಡಳಿತ ವರದಿ

ಮಹಾನಗರಪಾಲಿಕೆಯ ವಿತ್ತೀಯ ನಿರ್ವಹಣೆಯ ವಿಶ್ಲೇಷಣೆ ಮಾಡುವುದು ಈ ಅಧ್ಯಯನದ ಮುಖ್ಯ ಉದ್ದೇಶ ಆಗಿರುವುದರಿಂದ ಮುಂದಿನ ಆದಾಯದಲ್ಲಿ ಈ ಕುರಿತು ಚರ್ಚಿಸಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆ ಕರ್ನಾಟಕದ ಕರಾವಳಿಯಲ್ಲಿದ್ದು ಆರ್ಥಿಕ ಸೂಚಕಗಳನ್ನು ಗಮನಿಸಿದ ರಾಜ್ಯದಲ್ಲೇ ಶ್ರೀಮಂತ ಜಿಲ್ಲೆಯಾಗಿದೆ. ಕರಾವಳಿಯಲ್ಲಿರುವುದರಿಂದ ವಿದೇಶಿಯರ ಆಳ್ವಿಕೆಯ ಕಾಲದಲ್ಲಿ ಹೆಚ್ಚು ಪ್ರಭಾವಕ್ಕೊಳಗಾದ ಜಿಲ್ಲೆಯೂ ಹಾದು. ಇಲ್ಲಿ ಆರ್ಥಿಕ ಅಭಿವೃದ್ಧಿಗೆ ಬೇಕಾದ ಚಟುವಟಿಕೆಗಳಲ್ಲಿ ಅನೇಕ ಸಂಸ್ಥೆಗಳಲ್ಲಿ ಪಾಲ್ಗೊಂಡ ಇತಿಹಾಸದ ಇದೆ. ಸಹಕಾರಿ ಚಳವಳಿ, ಬ್ಯಾಂಕ್ ಚಳವಳಿ ಸ್ವಯಂ ಸೇವಾ ಸಂಸ್ಥೆಗಳ ಚಳವಳಿಗಳು. . . ಈ ಜಿಲ್ಲೆಯಲ್ಲಿ ಮಹತ್ತ್ವವನ್ನು ಪಡೆದಿದೆ.

ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸ್ಥಳೀಯ ಸಂಸ್ಥೆಗಳು ತಳಮಟ್ಟದಲ್ಲಿ ಅಭಿವೃದ್ಧಿ ಕಾರ್ಯಕ್ಕೆ ಪೆಚ್ಚು ಶ್ರಮಿಸುತ್ತಿವೆ. ಅಭಿವೃದ್ಧಿಯಲಿ ಸ್ಥಳೀಯರು ಪಾಲ್ಗೊಳ್ಳುವುದು ಇತಿಹಾಸದಿಂದಲೇ ಕಂಡುಬರುತ್ತದೆ. ಇತ್ತೀಚೆಗೆ ಸ್ಥಳೀಯ ಸಂಸ್ಥೆಗಳು ಅಭ್ಹಿವೃದ್ಧಿ ಕಾರ್ಯಕ್ಕೆ ಹಣ ವಿನಿಯೋಗಿಸುವುದು ಹಾಗೂ ಸಾರ್ವಜನಿಕ ಸೌಲಭ್ಯಗಳನ್ನು ಒದಗಿಸುವುದು ಹೆಚ್ಚಾಗಿರುವುದರಿಂದ ಅವುಗಳ ಆರ್ಥಿಕ ವಿಶ್ಲೇಷಣೆ ಮಾಡುವುದು ಅಗತ್ಯ. ಇದರಂತೆ ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯ ಕುರಿತು ಅಧ್ಯಯನ ನಡೆಸಲಾಗಿ ಮುಂದಿನ ಅಧ್ಯಾಯದಲ್ಲಿ ಅದರ ವಿಶ್ಲೇಷಣೆಯನ್ನು ಮಾಡಲಾಗಿದೆ.

ಅಧ್ಯಾಯ -4

# ವಿತ್ತೀಯ ನಿರ್ವಹಣೆ

- ಪ್ರವೇಶ
- ಜಿಲ್ಲಾ ಪಂಚಾಯತ್‌ಗಳಲ್ಲಿ ವಿತ್ತೀಯ ನಿರ್ವಹಣೆ
- ಮಹಾನಗರ ಪಾಲಿಕೆಯ ನಿರ್ವಹಣೆ
- ಆಸ್ತಿಗಳು
- ಆದಾಯ ಮತ್ತು ಅನುದಾನ ನಿರ್ವಹಣೆ
- ಹೂಡಿಕೆಗಳು
- ಖರ್ಚು ವೆಚ್ಚಗಳ ನಿರ್ವಹಣೆ
- ವಿತ್ತೀಯ ನಿರ್ವಹಣೆಯ ಸೂಚಕಗಳು

## ಪೀಠಿಕೆ

ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯ ಕುರಿತು ವಿಶ್ಲೇಷಣೆ ಮಾಡುವುದೇ ಈ ಅಧ್ಯಾಯದ ಮುಖ್ಯ ಉದ್ದೇಶ ಸ್ಥಳೀಯ ಸಂಸ್ಥೆಗಳ ಕುರಿತಾದ ಈ ಅಧ್ಯಯನದ (ಸಂಶೋಧನೆಯ) ಮುಖ್ಯ ಉದ್ದೇಶವು ಆದೇ ಅಭಿವೃದ್ಧಿ ಕಾರ್ಯಗಳಲ್ಲಿ ನಿರತವಾಗಿರುವ ಸಂಸ್ಥೆಗಳ ವಿತ್ತೀಯ ನಿರ್ವಹಣೆಯನ್ನು ವಿಶ್ಲೇಷಿಸಲು ಅನೇಕ ವಿಧಾನಗಳನ್ನು ಬಳಸಲಾಗುತ್ತದೆ. ಆದಾಯ ವೆಚ್ಚಗಳ ವಿಶ್ಲೇಷಣೆ, ಹೂಡಿಕೆ ಲಾಭಗಳ ವಿಶ್ಲೇಷಣೆ, ಉತ್ಪತ್ತಿಗಳ ವಿಶ್ಲೇಷಣೆ (ಮಾನವ ಉತ್ಪತ್ತಿ, ಬಂಡವಾಳ ಉತ್ಪತ್ತಿ, ಭೂ ಉತ್ಪತ್ತಿ) ಹೀಗೆ ಅನೇಕ ವಿಧಾನಗಳಿಂದ ವಿತ್ತೀಯ ನಿರ್ವಹಣೆಯನ್ನು ವಿಶ್ಲೇಷಿಸಲಾಗುತ್ತದೆ. ಈ ಅಧ್ಯಯನದಲ್ಲಿ ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯನ್ನು ವಿಶ್ಲೇಷಿಸುವುದರಿಂದ, ಸಾಮಾಜಿಕ ಲಾಭವೆಚ್ಚಗಳ ಬಗ್ಗೆ ಹೆಚ್ಚು ಗಮನಕೊಡಬೇಕಾಗಿದೆ. ಇಲ್ಲಿ ಸ್ಥಳೀಯ ಸಂಸ್ಥೆಗಳ ಆದಾಯ ಮತ್ತು ವೆಚ್ಚಗಳ ಸ್ವರೂಪದ ವಿಶ್ಲೇಷಣೆಯನ್ನು ಮಾಡಲಾಗಿದೆ. ಸ್ಥಳೀಯ ಸಂಸ್ಥೆಗಳ ಆದಾಯ ವೆಚ್ಚಗಳ ಸ್ವರೂಪಗಳಲ್ಲಿ ಕಳೆದ ಕೆಲವು ವರ್ಷಗಳಲ್ಲಿ ಆಗುತ್ತಿರುವ ಬದಲಾವಣೆಯನ್ನು ಪರೀಕ್ಷಿಸುವುದೇ ಇದರ ಉದ್ದೇಶ.

ಈ ಅಧ್ಯಯನದಲ್ಲಿ ಗ್ರಾಮೀಣ ಪ್ರದೇಶದ ಸ್ಥಳೀಯ ಸಂಸ್ಥೆ ಪಂಚಾಯತ್ ರಾಜ್ ಸಂಸ್ಥೆಗಳು ಮತ್ತು ನಗರ ಪ್ರದೇಶದ ಮಂಗಳೂರು ಮಹಾನಗರ ಪಾಲಿಕೆಗಳ ವಿತ್ತೀಯ ನಿರ್ವಹಣೆಗೆ ಸಂಬಂಧಿಸಿದ ಚರಕಗಳನ್ನು ವಿಶ್ಲೇಷಿಸಲಾಗಿದೆ.

## ಜಿಲ್ಲಾ ಪಂಚಾಯತ್‌ನಲ್ಲಿ ವಿತ್ತೀಯ ನಿರ್ವಹಣೆ.

ದ.ಕ ಜಿಲ್ಲಾ ಪಂಚಾಯತ್ ಸಂಸ್ಥೆಗಳ ಕುರಿತು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಮುಖ್ಯವಾಗಿ ಪಂಚಾಯತ್ ಶಾಲಾ ಸಂಸ್ಥೆಗಳ ಸೊತ್ತುಗಳು (Assets) ಆದಾಯ ವೆಚ್ಚ, ಅನುದಾನ ಹಾಗೂ ಅನುದಾನಗಳ ವಿನಿಯೋಗದ ಕುರಿತು ವಿಶ್ಲೇಷಿಸಲಾಗಿದೆ.

## ಸೊತ್ತುಗಳು

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (ಗ್ರಾಮ ಪಂಚಾಯತ್, ತಾಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತಿ ಅಧಿನಿಯಮ ನಂಬ್ರ 14 1993) ಪ್ರಕಾರ ಗ್ರಾಮ ಪಂಚಾಯತಿಯು ಅದು ಅಧಿಕಾರ ಹೊಂದಿರುವಂಥ ಪ್ರದೇಶದ ಪರಿಮಿತಿಯೊಳಗೆ ಆಗಲಿ ಅಥವಾ ಅದರ ಹೊರಗೆ ಆಗಲಿ ಇರುವ ಚರ ಅಥವಾ ಸ್ಥಿರ ಸೊತ್ತನ್ನು ಅರ್ಜಿಸುವ, ಧಾರಣ ಮಾಡುವ ಮತ್ತು ವಿಲೇವಾರಿ ಮಾಡುವ ಅಥವಾ ಅದರಲ್ಲಿ ನಿಹಿತಗೊಳಿಸಲಾದ ಅಥವಾ ಅದರಿಂದ ಅರ್ಜಿಸಲಾದ ಯಾವುದೇ ಚರ ಅಥವಾ ಸ್ಥಿರ ಸೊತ್ತಿನ ವರ್ಗಾವಣೆಗೆ ಮತ್ತು ಈ ಅಧಿನಿಯಮದ ಉದ್ದೇಶಕ್ಕಾಗಿ ಅವಶ್ಯವಿರುವ ಇತರ ಎಲ್ಲಾ ಕಾರ್ಯಗಳನ್ನು ಮಾಡಲು ಗ್ರಾಮಪಂಚಾಯತಿಗೆ ಇರುವ ಅಧಿಕಾರವು, ಈ ಸಂಬಂಧದಲ್ಲಿ ಸರಕಾರದಿಂದ ಮಾಡಲಾದ ನಿಯಮಗಳಿಗೆ ಒಳಪಟ್ಟಿರತಕ್ಕದ್ದು. ಐದು ವರ್ಷಗಳಿಗೆ ಮೀರಿದ ಅವಧಿಗೆ ಮಾಡಿದ ಸ್ಥಿರ ಸೊತ್ತಿನ ಗುತ್ತಿಗೆ ಮತ್ತು ಅಂಥ ಯಾವುದೇ ಸೊತ್ತಿನ ಇತರ ವರ್ಗಾವಣೆಯನ್ನು ತಾಲೂಕು ಪಂಚಾಯತಿಯ ಪೂರ್ವಾನುಮೋದನೆಯೊಂದಿಗೆ ಮಾಡಿದ ಹೊರತು ಮಾನ್ಯವಾಗಿರತಕ್ಕದ್ದಲ್ಲ.ಕಾಲಕಾಲಕ್ಕೆ ಗ್ರಾಮಪಂಚಾಯತಿಯ ಸಹಮತಿಯೊಂದಿಗೆ ಸಂದರ್ಭಾನುಸಾರ

ಸರಕಾರ, ಜಿಲ್ಲಾ ಪಂಚಯತ್ ಅಥವಾ ತಾಲೂಕು ಪಂಚಯತ್‌ನಲ್ಲಿ ನಿಹಿತಗೊಳಿಸಿರುವ ಯಾವುದೇ ಸೊತ್ತು, ಷರತ್ತುಗಳೊಂದಿಗೆ ಅಥವಾ ಷರತ್ತುಗಳಿಲ್ಲದ ಗ್ರಾಮ ಪಂಚಯತ್‌ನಲ್ಲಿ ನಿಹಿತವಾಗಿರತಕ್ಕದ್ದೆಂದು ನಿರ್ದೇಶಿಸುವುದಕ್ಕೆ ಸರಕಾರ, ಜಿಲ್ಲಾ ಪಂಚಾಯತ್ ಅಥವಾ ತಾಲೂಕು ಪಂಚಾಯತ್ ಸಕ್ಷಮವಾಗಿರತಕ್ಕದ್ದು. ಆದುದರಿಂದ ಸಂದರ್ಭನುಸಾರ ಸರಕಾರ, ಜಿಲ್ಲಾ ಪಂಚಾಯತ್ ಅಥವಾ ತಾಲೂಕು ಪಂಚಾಯತ್ ಪೂರ್ವಾನುಮೋದನೆಯಿಲ್ಲದೆ ಗ್ರಾಮ ಪಂಚಾಯತ್‌ಯಿಂದ ಮಾಡಲಾದ ಸ್ಥಿರಸೊತ್ತಿನ ಯಾವುದೇ ಗುತ್ತಿಗೆ ಮಾರಾಟ ಅಥವಾ ಇತರ ವರ್ಗಾವಣೆಯು ಮಾನ್ಯವಾಗತಕ್ಕದ್ದಲ್ಲ.

ಗ್ರಾಮ ಪಂಚಾಯತ್ ನಿಧಿಯಿಂದ ಗ್ರಾಮ ಪಂಚಾಯತ್ ಮಾಡಿಸಿದ ಪ್ರತಿಯೊಂದು ನಿರ್ಮಾಣ ಕಾಮಗಾರಿಯು ಅಂಥ ಗ್ರಾಮ ಪಂಚಯತ್‌ಯಲ್ಲಿ ನಿಹಿತವಾಗತ್ತಕ್ಕದ್ದು. ಆದುದರಿಂದ ಸರಕಾರ ತಾನು ಯುಕ್ತವೆಂದು ಭಾವಿಸಿದರೆ ಆದೇಶ ಹೊರಡಿಸುವ ಮೂಲಕ ಗ್ರಾಮ ಪಂಚಯತ್‌ನಲ್ಲಿ ನಿಹಿತವಾಗಿರುವ ಅಂಥ ರಸ್ತೆ, ಕಟ್ಟಡ ಅಥವಾ ಇತರ ಕಾಮಗಾರಿ ಸಂದರ್ಭನುಸಾರ ತಾಲೂಕು ಪಂಚಾಯತ್, ಜಿಲ್ಲಾ ಪಂಚಾಯತ್ ಅಥವಾ ಸರ್ಕಾರಕ್ಕೆ ವರ್ಗಾವಣೆಯಾಗಿದೆ ಎಂದು ಅಥವಾ ಅದರಲ್ಲಿ ನಿಹಿತವಾಗಿದೆ ಎಂದು ಘೋಷಿಸಬಹುದು. ಈ ಅಧಿನಿಯಮದ ಮೇರೆಗೆ ಗ್ರಾಮ ಪಂಚಾಯತ್‌ನಿಂದ ಸಂಗ್ರಹಿಸಲಾದ ಎಲ್ಲಾ ಕಸ, ಗ್ರಾಮ ಸಾರ ಕೊಳೆ ಮತ್ತು ಇತರ ವಸ್ತುಗಳು ಗ್ರಾಮ ಪಂಚಾಯತಿಗೆ ಸೇರಿರತಕ್ಕದ್ದು.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕಾರ ಗ್ರಾಮ ಪಂಚಾಯತ್ ನಿಧಿಯ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಇದರಲ್ಲಿ ಪಂಚಾಯತಗಳಿಗೆ ನೀಡಬಹುದಾದ ಅಥವಾ ಮಂಜೂರಾದ ಮೊಬಲಗುಗಳು, ಯಾವುದೇ ತೆರಿಗೆ, ದರ ಮತ್ತು ಫೀಜನಿಂದ ಬಂದ ಉತ್ಪತ್ತಿಗಳು, ಸರ್ಕಾರದಿಂದ ಅಥವಾ ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯಿಂದ ಸಾಲಗಳು ಅಥವಾ ಕೊಡುಗೆಗಳ ರೂಪದಲ್ಲಿ ಅಥವಾ ಕಾಣಿಕೆಯ ರೂಪದಲ್ಲಿ, ಗ್ರಾಮ ಪಂಚಾಯತ್‌ಯಿಂದ ಸ್ವೀಕರಿಸಲಾದ ಎಲ್ಲಾ ಮೊತ್ತಗಳು ಪಂಚಾಯತ್‌ನ ನಿಧಿಯಾಗಿರುತ್ತದೆ. ಈ ಅಧಿನಿಯಮದಲ್ಲಿ ಜಿಲ್ಲಾ ಪಂಚಾಯತ್ ನಿಧಿಯ ಬಗ್ಗೆ ಕೂಡ ವಿಮರ್ಶಿಸಲಾಗಿದೆ. ಅದರಲ್ಲಿ ಸರ್ಕಾರದ ಸಂಚಿತ ನಿಧಿಯಿಂದ ವಿನಿಯೋಗದ ಮೂಲಕ ಜಿಲ್ಲಾ ಪಂಚಾಯತ್ ನಿಧಿಗೆ ವರ್ಗಾಯಿಸಲಾದ ಮೊತ್ತಗಳು, ಸರ್ಕಾರದಿಂದ ಮಾಡಲಾದ ಎಲ್ಲಾ ಅನುದಾನಗಳು, ಹಸ್ತಾಂತರಣಗಳು, ಸಾಲಗಳು ಮತ್ತು ವಂತಿಕೆಗಳು, ಜಿಲ್ಲಾ ಪಂಚಾಯತ್ ಜಮೀನುಗಳಿಂದ ಬರುವ ಎಲ್ಲಾ ಬಾಡಿಗೆಗಳು, ಭದ್ರತೆಗಳು ಇತ್ಯಾದಿ. ಈ ಅಧಿನಿಯಮದ ಅಡಿಯಲ್ಲಿ ಜಿಲ್ಲಾ ಪಂಚಾಯತಿಗೆ ಸಂದಾಯ ಮಾಡಿದ ಎಲ್ಲಾ ಫೀಜುಗಳು ಮತ್ತು ದಂಡಗಳು ಅಥವಾ ಅದರಿಂದ ಅಥವಾ ಅದರ ಪರವಾಗಿ ವಿಧಿಸಲಾದ ಫೀಜುಗಳು ಮತ್ತು ದಂಡಗಳು ಮತ್ತು ಈ ಅಧಿನಿಯಮದ ಅಡಿಯಲ್ಲಿ ವಿಧಿಸಲಾದ ಎಲ್ಲಾ ದಂಡಗಳು. ಆದುದರಿಂದ ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ ದತ್ತಿಯ ರೂಪದಲ್ಲಿ ಸ್ವೀಕರಿಸಿದ ಯಾವುದೇ ಮೊತ್ತಗಳು ಜಿಲ್ಲಾ ಪಂಚಾಯತ್ ನಿಧಿಯ ಭಾಗವಾಗಿರತಕ್ಕದ್ದಲ್ಲ ಅಥವಾ ಅವಕ್ಕೆ ಸಂದಾಯವಾಗತಕ್ಕದ್ದಲ್ಲ. ಈ ರೀತಿ ಜಮೆಯಾದ ಮೊತ್ತಗಳನ್ನು ಸರ್ಕಾರಿ ಖಜಾನೆಯಲ್ಲಿ ಇಡತಕ್ಕದ್ದು ಮತ್ತು ಉಪಯೋಗಕ್ಕೆ ಅನುಸಾರವಾಗಿ ಬಳಸುವುದು.

## ಪಂಚಾಯತ್ ರಾಜ್ ಸಂಸ್ಥೆಗಳ ಆದಾಯ

ಪ್ರಮುಖವಾಗಿ ತೆರಿಗೆ, ಸ್ವಂತ ಆಸ್ತಿಯಿಂದ ಬರುವ ಆದಾಯ ಹಾಗೂ ಸರಕಾರಗಳಿಂದ ಬರುವ ಅನುದಾನ ಸ್ಥಳೀಯ ಸಂಸ್ಥೆಗಳ ಆದಾಯವಾಗಿರುತ್ತದೆ. ಸ್ಥಳೀಯ ಸಂಸ್ಥೆಗಳ ಗಾತ್ರ ಮತ್ತು ವಿವಿಧ

ಸ್ಥಳೀಯ ಸಂಸ್ಥೆಗಳ ಆದಾಯದ ಸ್ವರೂಪ ಬೇರೆ ಬೇರೆಯಾಗಿರುತ್ತದೆ. ಅಂದರೆ ನಗರಪಾಲಿಕೆ, ಪುರಸಭೆ, ನಗರಸಭೆ ಮತ್ತು ಪಂಚಾಯತ್‌ಗಳ ಆದಾಯ ಪ್ರಮಾಣ ಮತ್ತು ಸ್ವರೂಪ ಬೇರೆ ಬೇರೆಯಾಗಿರುತ್ತದೆ.

## ಮಹಾನಗರಪಾಲಿಕೆಯ ವಿತ್ತೀಯ ನಿರ್ವಹಣೆ

ದಕ್ಷಿಣಕನ್ನಡ ಜಿಲ್ಲೆಯಲ್ಲಿರುವ ಒಂದೇ ನಗರ ಪಾಲಿಕೆಯೆಂದರೆ ಮಂಗಳೂರು ಮಹಾನಗರ ಪಾಲಿಕೆ. ಈ ಅಧ್ಯಯನದಲ್ಲಿ ಮಹಾನಗರಪಾಲಿಕೆ, ಪುರಸಭೆ, ನಗರಸಭೆ, ಮತ್ತು ಪಂಚಾಯತ್‌ಗಳ ವಿತ್ತೀಯ ನಿರ್ವಹಣೆಗೆ ಸಂಬಂಧಿಸಿದ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಮೊದಲಿಗೆ ಮಂಗಳೂರು ಮಹಾನಗರ ಪಾಲಿಕೆಯ ವಿತ್ತೀಯ ಅಂಶಗಳನ್ನು ವಿಶ್ಲೇಷಣೆಮಾಡಲಾಗಿದ್ದು ಬಳಿಕ ಪುರಸಭೆ, ನಗರಸಭೆ ಮತ್ತು ಪಂಚಾಯತ್‌ಗಳ ಅಂಶಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಇದರಲ್ಲಿ ಪ್ರಮುಖವಾಗಿ ಸೊತ್ತುಗಳು, ಆದಾಯಗಳು, ವೆಚ್ಚ, ಅನುದಾನ ಹಾಗೂ ಅನುದಾನಗಳ ವಿನಿಯೋಗದ ಕುರಿತು ವಿಶ್ಲೇಷಿಸಲಾಗಿದೆ.

## ಆಸ್ತಿಗಳ ವಿವರ

ಯಾವುದೇ ಸಂಘ ಸಂಸ್ಥೆಗಳ ಅಭಿವೃದ್ಧಿ ಅವುಗಳು ಹೊಂದಿರುವ ಆಸ್ತಿಯನ್ನು ಅವಲಂಬಿಸಿರುತ್ತದೆ. ಆಸ್ತಿಗಳು ಸಂಸ್ಥೆಗಳು ಆರ್ಥಿಕ ಶಕ್ತಿಯನ್ನು ಸೂಚಿಸುತ್ತದೆ. ಇದರಿಂದ ಅವುಗಳಿಗೆ ಆದಾಯವು ಬರುತ್ತದೆ. ಮಂಗಳೂರು ಮಹಾನಗರ ಪಾಲಿಕೆಯ ಆಸ್ತಿಯ ವಿವರವನ್ನು ಕೋಷ್ಟಕ 4.1 ರಲ್ಲಿ ಗಮನಿಸಬಹುದು.

**ಕೋಷ್ಟಕ – 4.1: ಮಂಗಳೂರು ಮಹಾನಗರ ಪಾಲಿಕೆಯ ಆಸ್ತಿ**

| ಅವಧಿ | ಸ್ಥಿರ ಆಸ್ತಿ (ಲಕ್ಷ ರೂ.ಗಳಲ್ಲಿ | ಶೇಕಡಾವಾರು ಬೆಳವಣಿಗೆ ದರ | ನಿವ್ವಳ ಆಸ್ತಿ (ರೂ. ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇಕಡವಾರು) |
|---|---|---|---|---|
| 2006–07 | 7180.68 | --- | 2116.3 | --- |
| 2007–08 | 10272.00 | 43.05 | 3072.00 | 45.15% |
| 2008–09 | 10815.00 | 5.28 | 8680.78 | 182% |
| 2009–10 | 16276.00 | 11.79 | 9844.00 | 16.78% |
| 2010–11 | 18196.50 | 9.75 | 44496.30 | 17.20% |
| 2011–12 | 19971.81 | --- | 13474.44 | |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಕೋಷ್ಟಕ 4.1 ರಲ್ಲಿ ಮಂಗಳೂರು ಮಹಾನಗರ ಪಾಲಿಕೆಯ ಸ್ಥಿರ ಮತ್ತು ನಿವ್ವಳ ಆಸ್ತಿಯು ಬೆಳವಣಿಗೆ ದರದ ಶೇಕಡಾವಾರು ವಿಶ್ಲೇಷಣೆ ಮಾಡಲಾಗಿದೆ. 2006–07 ರಲ್ಲಿ ಸ್ಥಿರ ಆಸ್ತಿಯು 7180–68 ಲಕ್ಷರೂ.ಗಳಲ್ಲಿ ಇದ್ದು 2007–08ಕ್ಕೆ 43.05 ಶೇಕಡ ಹೆಚ್ಚಳವಾಗಿ 10272.00 ಲಕ್ಷರೂಪಾಯಿಗಳಲ್ಲಿತ್ತು. ಆದೇ ರೀತಿಯಲ್ಲಿ 2008 ರಿಂದ 2011ರ ವರಗೆ ಸ್ವಲ್ಪ ಮಟ್ಟಿನ ಏರಿಕೆಯಾಗಿ 2011–12ರಲ್ಲಿ 19971.81 ಲಕ್ಷರೂ.ಗಳ ಸ್ಥಿರ ಆಸ್ತಿ ಮಂಗಳೂರು ಮಹಾನಗರ ಪಾಲಿಕೆಯಲ್ಲಿವೆ. ನಿವ್ವಳ ಆಸ್ತಿಯು 2006–07ರಲ್ಲಿ 2116.3 ಲಕ್ಷರೂಗಳಿಂದ 3072.00 ಲಕ್ಷರೂ.ಗಳಾಗಿ 45.15 ಶೇ.ಹೆಚ್ಚಳವನ್ನು 2007–08ರಲ್ಲಿ ಕಂಡಿತು. ಅದೇ ರೀತಿಯಲ್ಲಿ 2008–09ರಲ್ಲಿ ಅದ್ಭುತವಾದ 182 ಶೇ.ಹೆಚ್ಚಳಕಂಡು

8680.78 ಲಕ್ಷರೂಪಾಯಿಗಳಿಗೆ ಏರಿಕೆಯಾಗಿದೆ. ಅದೇ ರೀತಿಯಲ್ಲಿ 2009-10ರಿಂದ 2010-11ಕ್ಕೆ 16.78 ಶೇ. ಹೆಚ್ಚಳಕಂಡು 44496.30 ಲಕ್ಷರೂಪಾಯಿ ಮಂಗಳೂರು ಮಹಾನಗರಪಾಲಿಕೆಯ ನಿವ್ವಳ ಆಸ್ತಿಯ ವಿವರವನ್ನು ಗಮನಿಸಬಹುದಾಗಿದೆ.

## ಆದಾಯ ಮತ್ತು ಅನುದಾನ

ಮಂಗಳೂರು ಮಹಾನಗರ ಪಾಲಿಕೆಯ ಹೂಡಿಕೆಗಳನ್ನು ನಾವು ಕೋಷ್ಟಕ: 4.2 ರಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ – 4.2: ಮಂಗಳೂರು ಮಹಾನಗರ ಪಾಲಿಕೆಯ ಹೂಡಿಕೆಗಳು**

| ಅವಧಿ | ಆದಾಯ ಬಾಕಿ (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) | ಪುನರ್ ನಿಶ್ಚಿತ ಅನುದಾನ (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) |
|---|---|---|---|---|
| 2006–07 | 8248.69 | --- | 121.25 | --- |
| 2007–08 | 11011 | 33.48% | 60 | –50.51 |
| 2008–09 | 14746.70 | 33.92% | 240 | 300 |
| 2009–10 | 15988 | 10.26% | 668 | –18.05 |
| 2010–11 | 17628.39 | 10.14% | 547.39 | 38.45 |
| 2011–12 | 19417.31 | --- | 757.87 | -- |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಹೂಡಿಕೆಯ ಆದಾಯ ಬಾಕಿಯನ್ನು 2006-07ರಲ್ಲಿ 8248.69 ಲಕ್ಷರೂಪಾಯಿಗಳಲ್ಲಿ ನೋಡುತ್ತೇನೆ ಅದೇ ರೀತಿಯಲ್ಲಿ ಶೇಕಡಾ 33.48 ಹೆಚ್ಚಳಕಂಡು 2007-08ರಲ್ಲಿ 14746.70 ಲಕ್ಷರೂಪಾಯಿಯಾಗಿರುತ್ತದೆ. 2009-10ರಲ್ಲಿ ಶೇಕಡಾ 10.26 ಹೆಚ್ಚಳವಾಗಿ 2010-11ರಲ್ಲಿ 17628.39 ಲಕ್ಷರೂಪಾಯಿ ಹೆಚ್ಚಾಗಿ ಶೇಕಡಾ 10.14 ವಾಗಿರುತ್ತದೆ. ಮತ್ತು 2011-12ರಲ್ಲಿ 19417.31 ಆದಾಯದ ಬಾಕಿಯನ್ನು ಹೂಡಿಕೆಯಲ್ಲಿ ಗಮನಿಸಬಹುದಾಗಿದೆ.

ಮಂಗಳೂರು ಮಹಾನಗರಪಾಲಿಕೆಯ ಪುನರ್ ನಿಶ್ಚಿತ ಅನುದಾನವನ್ನು ಹೂಡಿಕೆಯಲ್ಲಿ ಅಳವಡಿಸಿಕೊಂಡಿರುವಂತದದ್ದು ನೋಡಬಹುದಾಗಿದೆ. ಇದರಲ್ಲಿ 2006-07 ರಲ್ಲಿ 121.25 ಲಕ್ಷರೂಪಾಯಿಯಾಗಿ 2007-08ರಲ್ಲಿ ಕುಸಿತಕಂಡು 60 ಲಕ್ಷವಾಗಿ ನೇಥ್ಯರ್ತಕ ರೀತಿಯಲ್ಲಿ 50.51 ಶೇಕಡವಾಗಿರುತ್ತದೆ. ಅದೇ ರೀತಿಯಲ್ಲಿ 2008-09ರಲ್ಲಿ ಹೆಚ್ಚಳ ಕಂಡು 240 ಲಕ್ಷರೂಪಾಯಿಗಳಾಗಿ ಶೇ.300 ಜಾಸ್ತಿಯಾಗಿರುತ್ತದೆ 2009-10ರಲ್ಲಿ 668 ಲಕ್ಷರೂಪಾಯಾಗಿ 2010-11ರಲ್ಲಿ 547.39 ಲಕ್ಷರೂಪಾಯಿಯಾಗಿರುತ್ತದೆ ಮತ್ತು 2011-12ರಲ್ಲಿ 757.87 ಲಕ್ಷ ರೂಪಾಯಿ ಕಂಡು 38.45 ಶೇ.ಪುನರ್ ನಿಶ್ಚಿತ ಅನುದಾನಕ್ಕೆ ಹೂಡಿಕೆ ಮಾಡಿರುವುದನ್ನು ಗಮನಿಸಬಹುದು.

ಮಂಗಳೂರು ಮಹಾನಗರ ಪಾಲಿಕೆಯ ಹೂಡಿಕೆಯಾದ ಐಚ್ಛಿಕ ವಿಷಯಗಳಿಗೆ ನಿರ್ದಿಷ್ಟ ನಿಧಿ ಮತ್ತು ಸಾಲ, ಕಡಗಳನ್ನು ಕೋಷ್ಟಕ 4.3ರಲ್ಲಿ ಗಮನಿಸಬಹುದಾಗಿದೆ. ಐಚ್ಛಿಕ ವಿಷಯಗಳಿಗೆ ನಿರ್ಧಿಷ್ಟ ನಿಧಿಗಳಿಗೆ ಮಂಗಳೂರು ಮಹಾನಗರಪಾಲಿಕೆಯು 2006-07ರಲ್ಲಿ 819.74 ಲಕ್ಷರೂಪಾಯಿಗಳ ಹೂಡಿಕೆ ಮಾಡಿತ್ತು.

ಅದೇ ರೀತಿಯಲ್ಲಿ 2007-08ರಲ್ಲಿ 2164 ಲಕ್ಷ ರೂಪಾಯಿಗಳ ಹೆಚ್ಚಳ ಕಂಡು 163.98 ಶೇಕಡಾವಾಗಿರುತ್ತದೆ ಆದೇ ರೀತಿಯಲ್ಲಿ 2008-09ರಲ್ಲಿ 4400 ಲಕ್ಷರೂಪಾಯಿಯಾಗಿರುತ್ತದೆ, 2009-10ರಲ್ಲಿ 9174 ಲಕ್ಷರೂಪಾಯಾಗಿರುತ್ತದೆ. ಮತ್ತು 2010-11ರಲ್ಲಿ 11418.44 ವಾಗಿ 15.36 ಶೇಕಡಾ ಹೆಚ್ಚಳಕಂಡು 2011-12ರಲ್ಲಿ 13172.48 ಲಕ್ಷರೂಪಾಯಿಯಾಗಿರುತ್ತದೆ.

ಸಾಲ ಮತ್ತು ಕಡಗಳನ್ನು ಮಂಗಳೂರು ಮಹಾನಗರಪಾಲಿಕೆಯಲ್ಲಿ ನೋಡಬಹುದು ಇದರಲ್ಲಿ 2006-07ರಲ್ಲಿ 107.3 ಲಕ್ಷರೂಪಾಯಿ ಯಾಗಿರುತ್ತದೆ. ಮತ್ತು 2007-08ರಲ್ಲಿ ಕೇವಲ 1.58 ಶೇಕಡಾ ಹೆಚ್ಚಳವಾಗಿ 109 ಲಕ್ಷರೂಪಾಯಿಯಾಗಿರುತ್ತದೆ ಮತ್ತು 2008-09, 2009-10ರಲ್ಲಿ ಯಾವುದೇ ರೀತಿಯ ಹೆಚ್ಚಳವಿರುವುದಿಲ್ಲ ಮತ್ತು 2009-10 ಮತ್ತು 2011-12 ರಲ್ಲಿ ನೇಥ್ಯರ್ತಕ ರೀತಿಯಲ್ಲಿ ಕಮ್ಮಿ ಸಾಲ ಕಂಡು ಉತ್ತಮ ಭವಿಷ್ಯದ ವಿವರವನ್ನು ನೀಡುತ್ತದೆ.

**ಕೋಷ್ಟಕ – 4.3: ಮಂಗಳೂರು ಮಹಾನಗರ ಪಾಲಿಕೆಯ ಹೂಡಿಕೆಗಳು**

| ಅವಧಿ | ಐಚ್ಛಿಕ ವಿಷಯಗಳಿಗೆ ನಿದೀಷ್ಟ ನಿಧಿ (ರೂ. ಲಕ್ಷಗಳಲ್ಲಿ) | ಬೆಳವಣಿಗೆದರ (ಶೇ.) | ಸಾಲ ಮತ್ತು ಕಡಗಳು (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) |
|---|---|---|---|---|
| 2006-07 | 819.74 | -- | 107.3 | -- |
| 2007-08 | 2164 | 163.98 | 109 | 1.58 |
| 2008-09 | 4400 | 103.32 | 109 | 0 |
| 2009-10 | 9174 | 24.46 | 109 | -9.55 |
| 2010-11 | 11418.44 | 15.36 | 98.58 | 0 |
| 2011-12 | 13172.48 | -- | 98.58 | - |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರಪಾಲಿಕೆಯು ತೆರಿಗೆಯ ಮುಖಾಂತರ ಆದಾಯ ಸಂಗ್ರಹಿಸುವುದನ್ನು ಕೋಷ್ಟಕ 4.4 ರಲ್ಲಿ ಗಮನಿಸಬಹುದು.

**ಕೋಷ್ಟಕ-4.4: ಮಂಗಳೂರು ಮಹಾನಗರ ಪಾಲಿಕೆಯ ಆದಾಯ (ತೆರಿಗೆಯ ಆದಾಯ)**

| ಅವಧಿ | ತೆರಿಗೆ ಆದಾಯ (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) | ಸ್ವಂತ ಆದಾಯ (ಶೇ.) |
|---|---|---|---|
| 2006-07 | 624.17 | -- | 16.12 |
| 2007-08 | 680 | 8.94% | 16.71 |
| 2008-09 | 1256 | 84.70% | 21.36 |
| 2009-10 | 1846 | 46.97% | 34.59 |
| 2010-11 | 2467.09 | 30.17% | 37.83 |
| 2011-12 | 3224.97 | -- | 34.24 |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಗೆ ತೆರಿಗೆಯಿಂದ ಆದಾಯ 2006-07ರಲ್ಲಿ 624.17 ಲಕ್ಷರೂಪಾಯಿಯಾಗಿತ್ತು. ಇದು 2011-12ರಲ್ಲಿ 3224.97 ಏರಿಕೆಯಾಗಿರುತ್ತದೆ. ಆದೇ ರೀತಿಯಲ್ಲಿ ಸ್ವಂತ ಆದಾಯದಲ್ಲಿ 2006-07ರಲ್ಲಿ 16.12 ಶೇಕಡದಿಂದ 2011-12ರಲ್ಲಿ 34.24

ಶೇಕಡವಾಗಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ತೆರಿಗೇತರ ಆದಾಯ ಮಂಗಳೂರು ಮಹಾನಗರ ಪಾಲಿಕೆಯ ತೆರಿಗೇತರ ಆದಾಯವನ್ನು ಕೋಷ್ಟಕ-4.5ರಲ್ಲಿ ಗಮನಿಸಬಹುದು.

**ಕೋಷ್ಟಕ-4.5: ಮಂಗಳೂರು ಮಹಾನಗರ ಪಾಲಿಕೆಯ ತೆರಿಗೇತರ ಆದಾಯ ಮಂಗಳೂರು ಮಹಾನಗರ ಪಾಲಿಕೆಯ ತೆರಿಗೇತರ ಆದಾಯ.**

| ಅವಧಿ | ತೆರಿಗೇತಾರ ಆದಾಯ (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) | ಸ್ವಂತ ಆದಾಯ (ಶೇ.) |
|---|---|---|---|
| 2006-07 | 3248.13 | -- | 83.88 |
| 2007-08 | 3391 | 4.39 | 83.29 |
| 2008-09 | 4624 | 36.36 | 78.64 |
| 2009-10 | 3490 | 16.17 | 65.41 |
| 2010-11 | 4054.43 | 52.76 | 62.17 |
| 2011-12 | 6193.70 | -- | 65.76 |

ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ

ಮಂಗಳೂರು ಮಹಾನಗರ ಪಾಲಿಕೆಗೆ ತೆರಿಗೆಗಿಂತಲೂ ತೆರಿಗೇತರ ಮುಖಾಂತರ ಆದಾಯವು ಸಂಗ್ರಹವಾಗಿರುವುದನ್ನು ಗಮನಿಸಬಹುದು. 2006-07ರಲ್ಲಿ 3248.13 ರಿಂದ 6193.70 ಲಕ್ಷ ರೂಪಾಯಿಗಳನ್ನು 2011-12ರಲ್ಲಿ ಗಮನಿಸಬಹುದು. ಅದೇ ರೀತಿಯಲ್ಲಿ 52.76ಶೇಕಡಾ ಹೆಚ್ಚಳವಾಗಿರುವುದು ಗಮನರ್ಹ. ಪಾಲಿಕೆಯು ತೆರಿಗೇರರದಿಂದ ಸ್ವಂತ ಆದಾಯದಲ್ಲಿಯೂ, ವ್ಯತ್ಯಾಸದ ಹೆಚ್ಚಳವಾಗಿರುವುದನ್ನು ನೋಡಬಹುದು. ಇದು 2006-07ರಲ್ಲಿ 83.88 ಶೇಕಡದಿಂದ 2011-12 ರಲ್ಲಿ 65.76 ಶೇಕಡಾವಾಗಿರುವುದನ್ನು ಗಮನಿಸಬಹುದು.

**ಕೋಷ್ಟಕ- 4.6: ಮಂಗಳೂರು ಮಹಾನಗರ ಪಾಲಿಕೆಯ ಸ್ವಂತ ಆದಾಯ ಮೂಲಗಳು**

| ಅವಧಿ | ಮೂಲ ಸ್ವಂತ ಆದಾಯ (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) | (ಶೇ.) ಒಟ್ಟುಆದಾಯ |
|---|---|---|---|
| 2006-07 | 3248.13 | -- | 51.52 |
| 2007-08 | 3391 | 4.39 | 44.89 |
| 2008-09 | 3391 | 36.36 | 57.09 |
| 2009-10 | 4624 | 15.39 | 47.90 |
| 2010-11 | 5336 | 22.22 | 53.52 |
| 2011-12 | 6522 | - | 66.18 |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

**ಖರ್ಚು ವೆಚ್ಚಗಳು**

ಸ್ಥಳೀಯ ಸಂಸ್ಥೆಗಳು ಸ್ಥಳೀಯ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಸ್ಥಳೀಯ ಅಭಿವೃದ್ಧಿಗೆ ಸಂಬಂಧಿಸಿ ಮುಖ್ಯವಾಗಿ ಸ್ಥಳೀಯ ಸಂಸ್ಥೆಗಳು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸುತ್ತವೆ. ಇದರಲ್ಲೂ ಮುಖ್ಯವಾಗಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ. ಶಿಕ್ಷಣ ಆರೋಗ್ಯ, ರಸ್ತೆ, ಕುಡಿಯುವ ನೀರು, ಬೀದಿ ದೀಪ, ಚರಂಡಿ ವ್ಯವಸ್ಥೆ.. ಹೀಗೆ ಅನೇಕ ಸೌಲಭ್ಯಗಳನ್ನು ಒದಗಿಸುವ ಜವಾಬ್ದಾರಿ ಸ್ಥಳೀಯ ಸಂಸ್ಥೆಗಳಾಗಿದೆ. ಇದರಂತೆ ಮಂಗಳೂರು ಮಹಾನಗರ ಪಾಲಿಕೆ ಕೂಡಾ ಈ ಸೌಲಭ್ಯಗಳನ್ನು ಒದಗಿಸುವ ಅನೇಕ ಕಾರ್ಯಕ್ರಮಗಳನ್ನು ಮಾಡಿದೆ.

## ಮಂಗಳೂರು ಮಹಾನಗರ ಪಾಲಿಕೆಯ ಸೇವೆಗಳ ಸ್ಥಿತಿಗತಿಗಳು

**ಕೋಷ್ಟಕ – 4.7: ನೀರಿನ ಪೂರೈಕೆ**

| ಅವಧಿ | ಸಾಮಾನ್ಯ ಕಾಲದಲ್ಲಿ | ಬೇಸಿಗೆ ಕಾಲದಲ್ಲಿ |
|---|---|---|
| 2009–10 | 150 LPCD | 100 LPCD |
| 2010–11 | 160 LPCD | 100 LPCD |
| 2011–12 | 200 LPCD | 150 LPCD |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ನೀರಿನ ಪೂರೈಕೆಯುನ್ನು ಸಾಮಾನ್ಯಕಾಲ ಮತ್ತು ಬೇಸಿಗೆ ಕಾಲದಲ್ಲಿ ವಿಂಗಡನೆ ಮಾಡಿ ಸಾಮಾನ್ಯ ಕಾಲದಲ್ಲಿ 2009–10ರಿಂದ 2011–12ರ ನೀರಿನ ಪೂರೈಕೆಯು ಹೆಚ್ಚಳವಾಗಿ ಅಭಿವೃದ್ಧಿಯನ್ನು ಎತ್ತಿಹಿಡಿಯುವುದನ್ನು ಗಮನಿಸಬಹುದಾಗಿದೆ. ಅದು 150 ಯಲ್.ಪಿ.ಸಿ.ಡಿ. ಯಿಂದ 200 ಯಲ್.ಪಿ.ಸಿ.ಡಿ. ಗೆ ಅದೇ ರೀತಿಯಲಿ ಬೇಸಿಗೆ ಕಾಲದಲ್ಲಿಯು 100 ರಿಂದ 150 ಯಲ್.ಪಿ.ಸಿ.ಡಿ. ಯ ಹೆಚ್ಚಳ. ಮಂಗಳೂರು ಮಹಾನಗರ ಪಾಲಿಕೆಯ ನೀರಿನ ಸಂಪರ್ಕಗಳ ವಿವರವನ್ನು ಕೋಷ್ಟಕ–4.8ರಲ್ಲಿ ಗಮನಿಸಬಹುದಾಗಿದೆ.

**ಕೋಷ್ಟಕ–4.8: ಮಂಗಳೂರು ಮಹಾನಗರ ಪಾಲಿಕೆಯ ನೀರಿನ ಸಂಪರ್ಕ**

| ಅವಧಿ | ನೀರಿನ ಸಂಪರ್ಕ | ವಾರದಲ್ಲಿ ನೀರಿನ ಪೂರೈಕೆ | ನೀರಿನ ಪೂರೈಕೆ ಘಂಟೆಗಳು |
|---|---|---|---|
| 2009–10 | 71209.00 | 7 ದಿನಗಳು | 10 ಘಂಟೆಗಳು |
| 2010–11 | 74224.00 | 7 ದಿನಗಳು | 12 ಘಂಟೆಗಳು |
| 2011–12 | 75485 | 5 ದಿನಗಳು | 2 ಘಂಟೆಗಳು |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

## ರಸ್ತೆಗಳ ಅಭಿವೃದ್ಧಿ

ನಗರ ಪ್ರದೇಶದ ಅಭಿವೃದ್ಧಿಯ ರಸ್ತೆ ಸಂಪರ್ಕಗಳು ಹೆಚ್ಚಿನ ಮಹತ್ತ್ವ ಪಡೆದಿವೆ. ಮಂಗಳೂರು ನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಇತ್ತೀಚಿಗೆ ರಸ್ತೆಗಳ ಅಭಿವೃದ್ಧಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಕೋಷ್ಟಕ 4.9 ರಲ್ಲಿ ನಗರ ಪಾಲಿಕೆ ವ್ಯಾಪ್ತಿಯ ರಸ್ತೆಗಳ ವಿವರವನ್ನು ಗಮನಿಸಬಹುದು.

**ಕೋಷ್ಟಕ-4.9: ಮಂಗಳೂರು ನಗರಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ರಸ್ತೆಗಳ ವಿವರ (ಚದರ ಕಿ.ಮಿ)**

| ಅವಧಿ | ಕಲ್ಲು ಜಲ್ಲಿ ರಸ್ತೆ | ಟಾರ್ ರಸ್ತೆ | ಸಿಮೆಂಟ್ ರಸ್ತೆ | ಇತರೆ |
|---|---|---|---|---|
| 2007–08 | 52.37 | 721.67 | 73.08 | |
| 2008–09 | 54.16 | 711.67 | 82.58 | 29.5 |
| 2009–10 | 42.25 | 733.50 | 39.52 | 73.63 |
| 2010–11 | 42.25 | 733.50 | 39.52 | 73.63 |
| 2011–12 | 10.78 | 774.13 | 103.82 | 140.15 |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯಲ್ಲಿ 2007–08ರಲ್ಲಿ 52.37ಚದರ ಕಿ.ಮಿ. ಕಲ್ಲು ಜಲ್ಲಿ ರಸ್ತೆ ಇದ್ದು, 721.67 ಚದರ ಕಿ.ಮಿ. ಟಾರ್ ರಸ್ತೆ ಮತ್ತು ಸಿಮೆಂಟ್ ರಸ್ತೆಯು 73.08 ಚದರ ಕಿ.ಮಿ.ಗಳಾಗಿದ್ದವು. ಆದರೆ 2008–12ರಲ್ಲಿ ಕಲ್ಲು ರಸ್ತೆಯಲ್ಲಿ ಇಳಿಮುಖಕಂಡು 10.78 ಯಾಗಿ ಅಭಿವೃದ್ಧಿ ಪಂಥದಲ್ಲಿ ಮುನ್ನಡೆಯುವುದನ್ನು ನಾವು ನೋಡಬಹುದು. ಏಕೆಂದರೆ ಟಾರ್ ರಸ್ತೆ ಮತ್ತು ಸಿಮೆಂಟ್ ರಸ್ತೆಯಲ್ಲಿ ತುಂಬಾ ಅಭಿವೃದ್ಧಿಯಾಗಿ 103.82 ಚದರ ಕಿ.ಮಿ.ಗೆ ಹೆಚ್ಚಳಕಂಡಿತು. ಮಂಗಳೂರು ಮಹಾನಗರ ಪಾಲಿಕೆಯ ರಸ್ತೆಯ ಉದ್ದಕ್ಕೆ ಶೇಕಡವಾರು ರಸ್ತೆಯ ಪಕ್ಕಡ ಚರಂಡಿಯ ಉದ್ದಕ್ಕೆ ಶೇಕಡವಾರು ರಸ್ತೆಯ ಪಕ್ಕದ ಚರಂಡಿಯ ಉದ್ದವನ್ನು ಗಮನಿಸಬಹುದು.

**ಕೋಷ್ಟಕ-4.10 : ಮಂಗಳೂರು ಮಹಾನಗರ ಪಾಲಿಕೆಯ ರಸ್ತೆಯ ಉದ್ದಕ್ಕೆ ಶೇಕಡವಾರು ರಸ್ತೆಯ ಪಕ್ಕಡ ಚರಂಡಿಯ ಉದ್ದ**

| ಅವಧಿ | ಶೇಕಡ ವಾರು |
|---|---|
| 2009–10 | 50% |
| 2010–11 | 46% |
| 2011–12 | 46% |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಕೋಷ್ಟಕ-4.10 ರಲ್ಲಿ ಮಂಗಳೂರು ಮಹಾಸಗರ ಪಾಲಿಕೆಯ ರಸ್ತೆಗೆ ಅನುಗುಣವಾಗಿ ಉದ್ದಕ್ಕೆ 2009–10ರಲ್ಲಿ 50 ಶೇಕಡಾ ಇದ್ದು 2010–11ರಲ್ಲಿ 46 ಶೇಕಡಾ ಮತ್ತು 2011–12 ರಲ್ಲಿ ಕೂಡಾ 46 ಶೇಕಡಾ ಮತ್ತು 2011–12 ರಲ್ಲಿ ಕೂಡಾ 46 ಶೇಕಡಾವಾಗಿರುವುದನ್ನು ಗಮನಿಸಬಹುದು.ಮಂಗಳೂರು ಮಹಾನಗರಪಾಲಿಕೆಯ ಬೀದಿ ದೀಪಗಳನ್ನು ಅಳವಡಿಕೆಯನ್ನು ಕೋಷ್ಟಕ 4.11ರಲ್ಲಿ ಗಮನಿಸಬಹುದು.

**ಕೋಷ್ಟಕ-4.11: ಮಂಗಳೂರು ಮಹಾನಗರ ಪಾಲಿಕೆಯ ಬೀದಿ ದೀಪ .**

| ಅವಧಿ | ಹೈಮಾಸ್ಟ ದೀಪಗಳು | ಮರ್ಕ್ಯುರಿ ದೀಪಗಳು | ಕೊಳವೆ ದೀಪಗಳು | ಇತರೆ |
|---|---|---|---|---|
| 2007-09 | - | 48994 | - | 60420 |
| 2008-09 | 1829 | 2638 | 49338 | 60541 |
| 2009-10 | 1959.00 | 6909.00 | 2834.00 | 49821 |
| 2010-11 | 1959.00 | 6909.00 | 3834.00 | 49821 |
| 2011-12 | 663 | 9282 | 2380 | 48841 |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ರಾತ್ರಿ ವೇಳೆಯಲ್ಲಿ ಜನರ ರಕ್ಷಣೆಗೆ ಪಾಲಿಕೆಯ ಬೀದಿ ದೀಪಗಳನ್ನು ಅಳವಡಿಸಿದೆ. ಹೈಮಾಸ್ಟ್ ದೀಪಗಳಿಂದ ಕೊಳವೆ ದೀಪಗಳಿಗೆ ವರ್ಗಾವಣೆ ಹೊಂದಿರುತ್ತದೆ. ಇದನ್ನು 2008-09 ರಲ್ಲಿ ಹೈಮಾಸ್ಟ್ ದೀಪಗಳು 1829 ವಾಗಿರುತ್ತದೆ ಇದು 2011-12ಕ್ಕೆ 663 ವಾಗಿ ಮರ್ಕ್ಯುರಿ ದೀಪಗಳು 48994 ರಿಂದ 9282 ಮತ್ತು ಇತರೆ 48841 ವಾಗಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ಘನತ್ಯಾಜ್ಯ ವಸ್ತು ನಿರ್ವಹಣೆಯನ್ನು ಕೋಷ್ಟಕ 4.12 ರಲ್ಲಿ ಗಮನಿಸಬಹುದು.

**ಕೋಷ್ಟಕ-4.12: ಮಂಗಳೂರು ಮಹಾನಗರ ಪಾಲಿಕೆಯ ಘನ ತ್ಯಾಜ್ಯ ವಸ್ತು ನಿರ್ವಹಣೆ**

| ಅವಧಿ | ಉತ್ಪಾದಿಸಿರುವುದು | ಶೇಖರಿಸುವುದು | ಶುದ್ಧೀಕರಿಸಿರುವುದು | ಮನೆಗಳಿಂದ ಸಂಗ್ರಹಿಸಿದ್ದು |
|---|---|---|---|---|
| 2007-08 | 200TPD | 190 TPD | 190 TPD | 30% |
| 2008-09 | 200 TPD | 190 TPD | 190 TPD | 35% |
| 2009-10 | 225 TPD | 210 TPD | 40 TPD | 40% |
| 2010-11 | 220 TPD | 210 TPD | 90 TPD | 45% |
| 2011-12 | 210 TPD | 200 TPD | 162 TPD | 55% |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಘನತ್ಯಾಜ್ಯ ವಸ್ತು ನಿರ್ವಹಣೆಯನ್ನು ಕೋಷ್ಟಕ 4.12 ರಲ್ಲಿ ನೋಡಬಹುದಾಗಿದೆ. ಇದರಲ್ಲಿ 2007-08 ರಲ್ಲಿ 200 ಟಿಪಿಡಿ ಉತ್ಪಾದಿಸಿರುವುದನ್ನು ನೋಡುತ್ತೇನೆ ಅದೇ ತರವಲ್ಲಿ 2009-10 ರಲ್ಲಿ 225 ಟಿಪಿಡಿ ಮತ್ತು 2011-12ರಲ್ಲಿ 210 ಟಿಪಿಡಿ ಉತ್ಪಾದನೆ ಮಾಡಿ ಇಳಿಕೆ ಕಂಡಿತು ಈ ಸ್ವರೂಪವನ್ನು ಶೇಖರಿಸುವುದು ಮತ್ತು ಶುದ್ಧೀಕರಿಸಿರುವುದರಲ್ಲಿಯೂ ಕಾಣಬಹುದು ಮಾತ್ರವಲ್ಲದೆ ಸ್ವಚ್ಛತೆಗೆ ಮನೆಗಳಿಂದ 2007-08 ರಲ್ಲಿ 30 ಶೇಕಡಾ ಘನತ್ಯಾಜ್ಯವನ್ನು ಸಂಗ್ರಹಿಸಿತು. ಅದೇ ರೀತಿಯಲ್ಲಿ ಇದು 2011-12ರಲ್ಲಿ ಶೇಕಡ 55.0ರಷ್ಟು ಮಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಮನೆಯಿಂದ ಘನತ್ಯಾಜ್ಯವನ್ನು ಸಂಗ್ರಹಣೆ

ಮಾಡಿ ಅಭಿವೃದ್ಧಿ ಪಥದತ್ತ ಮುನ್ನಡೆಯುತ್ತಿದೆ. ಮಂಗಳೂರು ಮಹಾನಗರ ಪಾಲಿಕೆಯ ಸೇವೆಗಳ ವೆಚ್ಚ (2009–10)ವನ್ನು ಕೋಷ್ಟಕ 4.13ರಲ್ಲಿ ಗಮನಿಸಬಹುದು.

**ಕೋಷ್ಟಕ–4.13: ಮಂಗಳೂರು ಮಹಾನಗರ ಪಾಲಿಕೆಯ ಸೇವೆಗಳ ವೆಚ್ಚ** (2009–10)

| | |
|---|---|
| **ನೀರಿನ ಪೂರೈಕೆ(ರೂ.1 ಮಿಲಿಯನ್ ಲೀಟರಿಗೆ)** | ರೂ. 52000/– 40500 (ಮಿಲಿ) |
| **ರಸ್ತೆ ನಿರ್ವಹಣೆ** | ರೂ. 1,50,000 |
| **ಬೀದಿ ದೀಪಗಳ ನಿರ್ವಹಣೆ** | ರೂ. 1,50,000 |
| **ಘನ ತ್ಯಾಜ್ಯ ವಸ್ತು ನಿರ್ವಹಣೆ** | 1300 (ಟನ್) |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಸೇವೆಗಳ ವೆಚ್ಚವನ್ನು ಕೋಷ್ಟಕದಲ್ಲಿ ವಿಮರ್ಶೆ ಮಾಡಿದಾಗ, ನೀರಿನ ಪೂರೈಕೆಗೆ ರೂ.52000–40500 ಪ್ರತಿ ಮಿಲಿಯನ್ ಲೀಟರಿಗೆಯಾಗಿರುತ್ತದೆ ಎಂದು ಕಂಡುಬರುತ್ತದೆ. ಅದೇ ರೀತಿಯಲ್ಲಿ ರಸ್ತೆಯ ನಿರ್ವಹಣೆಗೆ ರೂ.1,50,000 ಲಕ್ಷ ರೂಪಾಯಿ ಬೀದಿ ದೀಪಗಳ ನಿರ್ವಹಣೆಗೆ ರೂ.1,50,000 ಮತ್ತು ಘನ ತ್ಯಾಜ್ಯ ವಸ್ತು ನಿರ್ವಹಣೆಗೆ ಪ್ರತಿ ಟನ್‌ಗೆ ರೂ.1300 ಯಾಗಿರುವುದನ್ನು ಗಮನಿಸಬಹುದು.

## ಅನುದಾನ

ಮಂಗಳೂರು ಮಹಾನಗರ ಪಾಲಿಕೆಯ ವಿತ್ತೀಯ ನಿರ್ವಹಣೆಯ ವಿಶ್ಲೇಷಣೆ ಮಾಡುವಾಗ ಅನುದಾನಕ್ಕೆ ಕೂಡ ಹೆಚ್ಚಿನ ಮಹತ್ತ್ವ ಕೊಡಬೇಕಾಗುತ್ತದೆ. ಇದರಲ್ಲಿ ರಾಜ್ಯ ವರ್ಗಾವಣೆಯಿಂದ ಅನುದಾನ, ಮಹಾನಗರ ಪಾಲಿಕೆಗೆ ಹಣದ ಅನುದಾನ ವಿವಿಧ ಮೂಲಗಳಿಂದ ಬರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ರಾಜ್ಯ ವರ್ಗಾವಣೆ ಅನುದಾನವನ್ನು ಕೋಷ್ಟಕ 4.14ರಲ್ಲಿ, ಗಮನಿಸಬಹುದು. **(ರೂ. ಲಕ್ಷಗಳಲ್ಲಿ)**

**ಕೋಷ್ಟಕ– 4.14: ಮಂಗಳೂರು ಮಹಾನಗರ ಪಾಲಿಕೆಯ ರಾಜ್ಯ ವರ್ಗಾವಣೆ ಅನುದಾನ**

| ಅವಧಿ | ರಾಜ್ಯ ವರ್ಗವಣೆ ಅನುದಾನ | (ಶೇ.) ಬೆಳವಣಿಗೆ ದರ |
|---|---|---|
| 2006–07 | 3643.85 | -- |
| 2007–08 | 4997 | 37.13 |
| 2008–09 | 4255 | –14.8 |
| 2009–10 | 5599 | –0.19 |
| 2010–11 | 5587.97 | –15.8 |
| 2011–12 | 4704.09 | -- |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ರಾಜ್ಯ ವರ್ಗಾವಣೆ ಅನುದಾನವನ್ನು ವಿಶ್ಲೇಷಣೆ ಮಾಡಿದಾಗ, 2006–07ರಲ್ಲಿ 3543.85 ಲಕ್ಷ ರೂಪಾಯಿಗಳಾಗಿತ್ತು ಎಂದು ತಿಳಿದುಬರುತ್ತದೆ. ಇದು 2007–08ರಲ್ಲಿ ಶೇಕಡಾ 37.13ರಷ್ಟು ಬೆಳವಣಿಗೆ ಕಂಡು ರೂ. 4997.00 ಲಕ್ಷಕ್ಕೆ ಏರಿಕೆಯಾಯಿತು. ಆದರೆ 2008–09ರಲ್ಲಿ ನೇತ್ಯಾತ್ಮಕ ರೀತಿಯಲಿ ಹಿನ್ನಡೆ ಕಂಡಿತು ಮತ್ತು ಇದು ಮುಂದುವರಿದು 2011–12ರಲ್ಲಿ 4704.09 ಲಕ್ಷ ರೂಪಾಯಿಗಳಾಗಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ಖರ್ಚಿನ ವಿವರವನ್ನು ಕೋಷ್ಟಕ 4.15 ರಲ್ಲಿ ಗಮನಿಸಬಹುದು

**ಕೋಷ್ಟಕ – 4.15: ಮಂಗಳೂರು ಮಹಾನಗರ ಪಾಲಿಕೆಯ ಖರ್ಚು**

| ಅವಧಿ | ಸಂಬಳ ಮತ್ತು ಸ್ಥಾಪನೆಗಳು (ರೂ.ಲಕ್ಷಗಳಲ್ಲಿ) | ಬೆಳವಣಿಗೆಯ ದರ (ಶೇ.) | ವ್ಯವಹಾರ ಮತ್ತು ನಿರ್ವಹಣೆ (ರೂ.ಲಕ್ಷಗಳಲ್ಲಿ) | ಬೆಳವಣಿಗೆಯ ದರ (ಶೇ.) | ಸವಕಳಿ (ರೂ.ಲಕ್ಷಗಳಲ್ಲಿ) | ಬೆಳವಣಿಗೆಯ ದರ (ಶೇ.) |
|---|---|---|---|---|---|---|
| 2006–07 | 932.03 | -- | 2475.22 | -- | 585.84 | -- |
| 2007–08 | 1143 | 22.63 | 3794 | 53.27 | 1355 | 131.41 |
| 2008–09 | 1204 | 5.33 | 2646 | –30.25 | 1443 | 6.49 |
| 2009–10 | 1327.16 | 10.22 | 5653.25 | 113.65 | 1799.16 | 24.68 |
| 2010–11 | 1367.65 | 21.37 | 5899.50 | 7.50 | 2074.07 | 15.27 |
| 2011–12 | 1660.02 | -- | 6342.38 | -- | 2283.66 | -- |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯು ತನ್ನ ಆದಾಯದಿಂದ ಸಂಬಳ ಮತ್ತು ಸ್ಥಾಪನೆ, ವ್ಯವಹಾರ ಮತ್ತು ನಿರ್ವಹಣೆ ಮಾತ್ರವಲ್ಲದೆ ಸವಕಳಿ ಮುಖಾಂತರ ವಿಮರ್ಶನೆಮಾಡಬಹುದಾಗಿದೆ. 2006–07ರಲ್ಲಿ ಸಂಬಳ ಮತ್ತು ಸ್ಥಾಪನೆಗೋಸ್ಕರ 932.03 ಲಕ್ಷ ರೂಪಾಯಿ ಖರ್ಚು ಮಾಡಿತು. ಅದೇ ರೀತಿಯಲ್ಲಿ 2011–12ರಲ್ಲಿ 1660.02 ಲಕ್ಷ ರೂಪಾಯಿಗಳ ಏರಿಕೆಯಾಗಿರುವುದನ್ನು ಗಮನಿಸಬಹುದು. ಖರ್ಚಿಗೆ ಸಂಬಂಧ ಪಟ್ಟಂತೆ ವ್ಯವಹಾರ ಮತ್ತು ನಿರ್ವಹಣೆಗೋಸ್ಕರ ಕೂಡ 2006–07ರಲ್ಲಿ 2475.22 ಲಕ್ಷ ರೂಪಾಯಿ ಖರ್ಚು ಮಾಡಿರುವುದನ್ನು ಗಮನಿಸಬಹುದು. ಮಾತ್ರವಲ್ಲದೆ ಇದು 2011–12ಕ್ಕೆ 6342.38 ಲಕ್ಷ ರೂಪಾಯಿಯಾಗಿರುವುದು. ಈ ರೀತಿಯ ಬೆಳವಣಿಗೆಯು ಅಭಿವೃದ್ಧಿಯನ್ನು ಸೂಚಿಸುತ್ತದೆ. ಇದು ಸವಕಳಿಯಲ್ಲಿಯೂ ಕಾಣಸಿಗುವುದನ್ನು ವಿಶ್ಲೇಷಣೆ ಮಾಡಬಹುದಾಗಿದೆ. ಮಂಗಳೂರು ಮಹಾನಗರ ಪಾಲಿಕೆಯ ಒಟ್ಟು ಆದಾಯದಿಂದ ಆಗುವ ಖರ್ಚುಗಳ ವಿಶ್ಲೇಷಣೆಯನ್ನು ಕೋಷ್ಟಕ 4.16ರಲ್ಲಿ ಗಮನಿಸಬಹುದು.

**ಕೋಷ್ಟಕ – 4.16: ಮಂಗಳೂರು ಮಹಾನಗರ ಪಾಲಿಕೆಯ ಒಟ್ಟು ಆದಾಯದಲ್ಲಿರುವ ಖರ್ಚು**

| ಅವಧಿ | ಒಟ್ಟು ಆದಾಯದ ಖರ್ಚು (ರೂ. ಲಕ್ಷಗಳಲ್ಲಿ) | ಬೆಳವಣಿಗೆಯ ದರ(ಶೇ.) |
|---|---|---|
| 2006–07 | 4779.5 | -- |
| 2007–08 | 6595.52 | 37.99 |
| 2008–09 | 5605.58 | –15.00 |
| 2009–10 | 9087.38 | 62.11 |
| 2010–11 | 9786.18 | 7.68 |
| 2011–12 | 11275.64 | 15.22 |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಒಟ್ಟು ಆದಾಯದಿಂದ ಆಗಿರುವಂತಹ ಖರ್ಚನ್ನು ಕೋಷ್ಟಕ 4.16ರಲ್ಲಿ ಮುಖಾಂತರ ವಿಶ್ಲೇಷಣೆ ಮಾಡಲಾಗಿದೆ. ಒಟ್ಟು ಆದಾಯವು 2006–07ರಲ್ಲಿ 4779.5 ಲಕ್ಷ ರೂಪಾಯಿಂದ 2007–08ರಿಗೆ 6595.52 ಲಕ್ಷರೂಪಾಯಿಗಳ ಏರಿಕೆಯಾಗಿ 37.99 ಶೇಕಡ ಖರ್ಚಾಯಿತು. ಆದರೆ 2008–09ರಲ್ಲಿ ನೇಥ್ಯರ್ತಕವಾಗಿರುವುದನ್ನು ಗಮನಿಸಬಹುದಾಗಿದೆ. 2009–10 ರಿಂದ ಚೇತರಿಕೆಯಾಗಿ 9087.38 ಲಕ್ಷರೂಪಾಯಿಗಳಿಗೆ ಏಳಿಗೆಯಾಗಿದೆ. ಇದು 2011–12ರಲ್ಲಿ 11275.64 ಲಕ್ಷ ರೂಪಾಯಿಗಳ ಏರಿಕೆಯಾಗಿರುವುದನ್ನು ಗಮನಿಸಬಹುದಾಗಿದೆ. ಮಂಗಳೂರು ಮಹಾನಗರ ಪಾಲಿಕೆಯ ಹಣಕಾಸಿನ ಸೂಚಿಗಳನ್ನು ಕೋಷ್ಟಕ 4.17ರಲ್ಲಿ ಗಮನಿಸಬಹುದು.

**ಕೋಷ್ಟಕ–4.17: ಮಂಗಳೂರು ಮಹಾನಗರ ಪಾಲಿಕೆಯ ಹಣಕಾಸಿನ ಸೂಚಿಗಳು (ಕಾರ್ಯ ನಿರ್ವಹಣೆಯ ಅನುಪಾತ)**



| ಅವಧಿ | ಹೆಚ್ಚುವರಿ/ಕೊರತೆ | ಆದಾಯ–ಪ್ರತಿ ನಾಗರಿಕನಿಗೆ (ರೂ.ಗಳಲ್ಲಿ) | ವೆಚ್ಚ ಪ್ರತಿ ನಾಗರಿಕನಿಗೆ (ರೂ.ಗಳಲ್ಲಿ) | ತೆರಿಗೆ ಸ್ವೀಕೃತಿ (ರೂ.ಲಕ್ಷಗಳಲ್ಲಿ) | ತೆರಿಗೆಯಲ್ಲದ ಸ್ವೀಕೃತಿ ತಲಾ (ರೂ.ಗಳಲ್ಲಿ) |
|---|---|---|---|---|---|
| 2009–10 | 18.42% | 1272.51 | 1421.18 | 563.32 | 789.94 |
| 2010–11 | 19.69% | 1555.31 | 1509.33 | 602.06 | 905.39 |
| 2011–12 | 20.77% | 1902.76 | 1480.41 | 503.59 | 1278.58 |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಹಣಕಾಸಿನ ಸೂಚಿಗಳನ್ನು ವಿಶ್ಲೇಷಣೆ ಮಾಡುವಾಗ ಅನುಪಾತ ಆದಾಯ–ಪ್ರತಿ ನಾಗರಿಕನಿಗೆ, ವೆಚ್ಚ ಪತ್ರಿ ನಾಗರಿಕನಿಗೆ, ತೆರಿಗೆ ಸ್ವೀಕೃತಿ ಮತ್ತು ತೆರಿಗೆಯಲ್ಲದ ಸ್ವೀಕೃತಿಯನ್ನು ವಿಶ್ಲೇಷಣೆ ಮಾಡಬಹುದಾಗಿದೆ. 2009–10ರಲ್ಲಿ ಮಹಾನಗರ ಪಾಲಿಕೆಯಲ್ಲಿ ಹೆಚ್ಚುವರಿ ಅನುಪಾತ ಮತ್ತು ಕೊರತೆಯ ಅನುಪಾತವನ್ನು ಗಣನೆಗೆ ತೆಗೆದುಕೊಂಡು ಬೆಳವಣಿಗೆಯ ದರದಲ್ಲಿ ವಿಶ್ಲೇಷಣೆ ಮಾಡಿದಾಗ ಶೇ. 6.89 ಹೆಚ್ಚಳ ಕಂಡು 2010–11 ದಕ್ಕೆ ಶೇ. 19.69ಯಾಗಿರುತ್ತದೆ. ಅದು ಮುಂದುವರಿದು ಶೇ. 20.77 ಏರಿಕೆಯನ್ನು ಗಮನಿಸಬಹುದು. ಪ್ರತಿ ನಾಗರಿಕನಿಗೆ ಆದಾಯವು 1272.51

ಲಕ್ಷರೂಪಾಯಿ 2009-10 ರಲ್ಲಿ ಇದ್ದು ಇದು ಏರಿಕೆಯಾಗಿ 1902.76 ಲಕ್ಷ ರೂಪಾಯಿ 2011-12ರಲ್ಲಿಯಾಗಿರುತ್ತದೆ. ಅದೇ ರೀತಿಯಲ್ಲಿ ಪ್ರತಿ ನಾಗರಿಕನಿಗೆ 1421.18 ರೂ.ಗಳಿಂದ 2011-12 ರಲ್ಲಿ 1480.41 ರೂಪಾಯಿಯಾಗಿರುತ್ತದೆ. ತೆರಿಗೆ ಸ್ವೀಕೃತಿಗಳಲ್ಲಿ ಏರಿಳಿತವನ್ನು ನೋಡುತ್ತೇವೆ. ಆದೇ ರೀತಿಯಲ್ಲಿ ತೆರಿಗೆಯಲ್ಲದ ಸ್ವೀಕೃತಿಯಲ್ಲಿಯೂ ಕೂಡ ಏರಿಕೆಯಾಗಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ದಕ್ಷತೆಯ ಅನುಪಾತವನ್ನು ಕೋಷ್ಟಕ 4.18ರಲ್ಲಿ ಗಮನಿಸಬಹುದು.

**ಕೋಷ್ಟಕ- 4.18: ಮಂಗಳೂರು ಮಹಾನಗರ ಪಾಲಿಕೆಯ ದಕ್ಷತೆಯ ಅನುಪಾತ**

| ಅವಧಿ | ಪ್ರಸಕ್ತ ಸಾಲಿನ ಆಸ್ತಿ ತೆರಿಗೆಯ ಸಂಗ್ರಹಣಾ ಅನುಪಾತ (%) | ಹಿಂದಿನ ಸಾಲಿನ ಬಾಕಿ ಆಸ್ತಿ ತೆರಿಗೆಯಿಂದ ಸಂಗ್ರಹಣಾ ಅನುಪಾತ (%) | ನಿವ್ವಳ ಆಸ್ತಿಯ ಅನುಪಾತದಲ್ಲಿ ನಿರ್ವಹಣಾ ವೆಚ್ಚ (%) |
|---|---|---|---|
| 2010-11 | 81.46 | 71.46 | 18.73 |
| 2011-12 | 73.81 | 67.02 | 31.76 |

ಮೂಲ: *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ದಕ್ಷತೆಯ ಅನುಪಾತವನ್ನು ಗಣನೆಗೆ ತೆಗೆದುಕೊಳ್ಳುವಾಗ ಪ್ರಸಕ್ತ ಸಾಲಿನ ಆಸ್ತಿ ತೆರಿಗೆಯ ಸಂಗ್ರಹಣಾ ಅನುಪಾತ, ಹಿಂದಿನ ಸಾಲಿನ ಬಾಕಿ ಆಸ್ತಿ ತೆರಿಗೆಯಿಂದ ಸಂಗ್ರಹಣಾ ಅನುಪಾತ ಮತ್ತು ನಿವ್ವಳ ಆಸ್ತಿಯ ಅನುಪಾತದಲ್ಲಿ ನಿರ್ವಹಣಾ ವೆಚ್ಚವನ್ನು ಗಮನಿಸಬಹುದು. 2010-11 ರಲ್ಲಿ ಆಸ್ತಿ ತೆರಿಗೆಯ ಸಂಗ್ರಹವು ಶೇ. 81.46 ಆಗಿತ್ತು. ಇದು 2011-12ರಲ್ಲಿ ಶೇ.73.81 ಆಗಿ ಹಿನ್ನಡೆಕಂಡಿತು. ಆದೇ ರೀತಿಯಲ್ಲಿ ಹಿಂದಿನ ಸಾಲಿನ ಬಾಕಿ ಆಸ್ತಿತೆರಿಗೆಯಿಂದ ಸಂಗ್ರಹಣಾ ಅನುಪಾತದಲ್ಲಿ ಶೇ. 6.21ರಷ್ಟು ಹಿನ್ನಡೆ ಕಂಡು ಶೇ.71.46 ದಿಂದ ಶೇ.67.02ಗೆ ಕಡಿಮೆಯಾಯಿತು. ಆದರೆ ನಿವ್ವಳ ಆಸ್ತಿಯ ಅನುಪಾತದಲ್ಲಿ ನಿರ್ವಹಣಾ ವೆಚ್ಚವು ಶೇಕಡಾ 18.73 ದಿಂದ 2011-12ಕ್ಕೆ ಶೇಕಡಾ 31.76 ಹೆಚ್ಚಳವಾಗಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ಆಸ್ತಿ ಅನುಪಾತವನ್ನು ಕೋಷ್ಟಕ 4.19 ರಲ್ಲಿ ಗಮನಿಸಬಹುದು.

**ಕೋಷ್ಟಕ- 4.19:ಮಂಗಳೂರು ಮಹಾನಗರ ಪಾಲಿಕೆಯ ಆಸ್ತಿ ಅನುಪಾತ**

| ಅವಧಿ | ಆಸ್ತಿಗಳಲ್ಲಿ ಸ್ಥಿರಾಸ್ತಿಗಳ ಅನುಪಾತ (%) |
|---|---|
| 2009-10 | 54.65 |
| 2010-11 | 53.65 |
| 2011-12 | 53.05 |

ಮೂಲ: *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಸ್ಥಿರಾಸ್ತಿಗಳ ವಿವರವನ್ನು ಕೋಷ್ಟಕ 4.19ರಲ್ಲಿ ಗಮನಿಸಬಹುದು. ಇದು 2009–10ರಲ್ಲಿ ಶೇಕಡಾ 54.65 ರಷ್ಟಾಗಿತ್ತು ಆದೇ ರೀತಿಯಲ್ಲಿ ಶೇಕಡಾ 53.65 ರಷ್ಟು 2010–11ರಲ್ಲಿ ಇದ್ದರೆ 2011–12 ರಲ್ಲಿ ಸ್ವಲ್ಪ ಮಟ್ಟಿನ ಹಿನ್ನಡೆ ಕಂಡು ಶೇಕಡಾ 53.05 ರಷ್ಟು ಇರುವುದನ್ನು ವಿಮರ್ಶನೆ ಮಾಡಲಾಗಿದೆ. ಮಂಗಳೂರು ಮಹಾನಗರ ಪಾಲಿಕೆಗೆ SFC, United Grants ನಿಂದ ದೊರೆಯುವಂತಹ ಹಣದ ಅನುದಾನ.

**ಕೋಷ್ಟಕ– 4.20: ಮಂಗಳೂರು ಮಹಾನಗರ ಪಾಲಿಕೆಗೆ ಹಣದ ಅನುದಾನ (SFC, United Grants)**

| ಅವಧಿ | ಹಣದ ಬಿಡುಗಡೆ (ರೂ.ಲಕ್ಷಗಳಲ್ಲಿ) | ಬೆಳವಣಿಗೆಯ ದರ |
|---|---|---|
| 2007–08 | 1792.20 | –– |
| 2008–09 | 1394.61 | –22.18 |
| 2009–10 | 1816.71 | 30.26 |
| 2010–11 | 1533.69 | –– |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಗೆ 2007–08 ರಲ್ಲಿ 1792.20 ಲಕ್ಷರೂಪಾಯಿಗಳ ಅನುದಾನವು ದೊರೆತಿರುತ್ತದೆ. ಆದರೆ 2008–09 ರಲ್ಲಿ ಕೇವಲ 1394.61 ಲಕ್ಷ ರೂಪಾಯಿ ದೊರೆತು ಹಿನ್ನಡೆ ಕಂಡಿರುತ್ತದೆ. 2009–10ರಲ್ಲಿ ಚೇತರಿಕೆ ಕಂಡು 1816.71ರಷ್ಟು ಅನುದಾನ ದೊರೆತು ಇದು ಶೇ.30.26 ರಷ್ಟಾಯಿತು ಮತ್ತು 2010–11ರಲ್ಲಿ 1533.69 ಲಕ್ಷ ರೂಪಾಯಿ SFC, United Grants ನಿಂದ ಮಂಗಳೂರು ಮಹಾನಗರ ಪಾಲಿಕೆಗೆ ದೊರೆತಿರುವುದನ್ನು ಗಮನಿಸಬಹುದು.ಮಂಗಳೂರು ಮಹಾನಗರ ಪಾಲಿಕೆಯ ಹಣದ ಅನುದಾನದಿಂದ ಆಗುವಂತಹ ಖರ್ಚನ್ನು ಕೋಷ್ಟಕ 4.20 (ಅ) ದಿಂದ ಗಮನಿಸಬಹುದು

**ಕೋಷ್ಟಕ–4.20 (ಅ): ಮಂಗಳೂರು ಮಹಾನಗರಪಾಲಿಕೆಗೆ ಹಣದ ಅನುದಾನದಿಂದ ಖರ್ಚು (SFC, United Grants)**

| ಅವಧಿ | ಖರ್ಚು (ರೂ.ಲಕ್ಷಗಳಲ್ಲಿ) | ಬೆಳವಣಿಗೆ ದರ (ಶೇ.) |
|---|---|---|
| 2007–08 | 1647.01 | –– |
| 2008–09 | 1894.61 | –15.32 |
| 2009–10 | 679.76 | –51.2 |
| 2010–11 | 371.51 | – |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಗೆ ಹಣದ ಅನುದಾನದಿಂದ ಮಾಡಿರುವಂತಹ ಖರ್ಚನ್ನು ಕೋಷ್ಟಕ 4.20 (ಅ)ದಲ್ಲಿ ವಿಶ್ಲೇಷಣೆ ಮಾಡಲಾಗಿದೆ. 2007–08ರಲ್ಲಿ 1647.01 ಲಕ್ಷ ರೂಪಾಯಿಗಳ ಖರ್ಚಾಗಿದೆ. ಆದರೆ ಇದು 2009–10ರಲ್ಲಿ 679.76 ಲಕ್ಷ ರೂಪಾಯಿಗಳ ಖರ್ಚಾಗಿ ಹಿನ್ನಡೆ ಕಂಡಿದೆ

ಅದೇ ರೀತಿಯಲ್ಲಿ ಇದು 2010-11ರಲ್ಲಿ 371.51 ಲಕ್ಷರೂಪಾಯಿಗಳ ಖರ್ಚನ್ನು ಅಭಿವೃದ್ಧಿ ಕಾರ್ಯಗಳಿಗೆ ಮಾಡಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಯ ಹಣ ಅನುದಾನ (ನಿಧಿ)ಯ ಉಪಯೋಗವನ್ನು ಕೋಷ್ಟಕ4.20(ಅ)ರಲ್ಲಿ ಗಮನಿಸಬಹುದು.

**ಕೋಷ್ಟಕ 4.20 (ಅ):ಮಂಗಳೂರು ಮಹಾನಗರ ಪಾಲಿಕೆಗೆ ಹಣದ ಅನುದಾನದ ಹಣದ (ನಿಧಿ) ಯ ಉಪಯೋಗ (SFC, United Grants, funds utilized)**

| ಅವಧಿ | ಶೇ.ಹಣದ ಉಪಯೋಗ | ಬೆಳವಣಿಗೆ ದರ (ಶೇ.) |
|---|---|---|
| 2007.08 | 91.90 | -- |
| 2008.09 | 100 | 8.81 |
| 2009.10 | 37.42 | -62.58 |
| 2010-11 | 24.22 | -- |

**ಮೂಲ:** ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ

2007-08ರಲ್ಲಿ ಮಂಗಳೂರು ಮಹಾನಗರ ಪಾಲಿಕೆಯು 91.90 ಶೇಕಡಾ ಹಣವನ್ನು ಅನುದಾನದಿಂದ ಉಪಯೋಗ ಮಾಡಿರುವುದನ್ನು ಗಮನಿಸಬಹುದು. ಅದೇ ರೀತಿಯಲ್ಲಿ 2008-09ರಲ್ಲಿ ಶೇ.100 ಉಪಯೋಗಿಸಿ ಶೇ.8.81 ರಷ್ಟು ಬೆಳವಣಿಗೆಯನ್ನು ಕಾಣುತ್ತದೆ. ಆದರೆ 2009-10ರಲ್ಲಿ ಕೇವಲ ಶೇ. 37.42 ಹಣದ ಉಪಯೋಗ ಮಾಡಿ ನೇಥ್ಯರ್ತಕವಾಗಿ ಶೇ. (-62.58) ಹಿನ್ನಡೆ ಕಾಣುವುದನ್ನು ನೋಡಬಹುದು. 2010-11ರಲ್ಲಿ 24.22ರಷ್ಟು ಹಣ (ನಿಧಿ)ಯು ಉಪಯೋಗವನ್ನು ಗಮನಿಸಬಹುದು.

ಮಂಗಳೂರು ಮಹಾನಗರ ಪಾಲಿಕೆಗೆ ಯುನೈಟೆಡ್ ಅನುದಾನ ಬಿಡುಗಡೆ, ಕೋಷ್ಟಕ 4.21ದಿಂದ ಗಮನಿಸಬಹುದು.

**ಕೋಷ್ಟಕ 4.21: ಮಂಗಳೂರು ಮಹಾನಗರ ಪಾಲಿಕೆಗೆ ಯುನೈಟೆಡ್ ಅನುದಾನದ ಬಿಡುಗಡೆ**

| ಅವಧಿ | ಯುನೈಟೆಡ್ ಅನುದಾನ (ಲಕ್ಷ ರೂಪಾಯಿ) | ಬೆಳವಣಿಗೆಯ ದರ |
|---|---|---|
| 2005-06 | 327.04 | -- |
| 2006-07 | 594.60 | 81.81 |
| 2007-08 | 1792.22 | 20.40 |
| 2008-09 | 2157.84 | -19.02 |
| 2009-10 | 1747.30 | 347.56 |
| 2010-11 | 7855.20 | -- |

**ಮೂಲ:** *ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಗೆ ಹೆಚ್ಚಿನ ಮಟ್ಟದಲ್ಲಿ ಯುನೈಟೆಡ್ ಅನುದಾನದಿಂದ ಅಭಿವೃದ್ಧಿ ಕಾರ್ಯಗಳಿಗೆ ಹಣದ ಬಿಡುಗಡೆಯಾಗಿರುವುದನ್ನು ನೋಡಬಹುದು. 2005-06ರಲ್ಲಿ 327.04 ಲಕ್ಷ ರೂಪಾಯಿಯಷ್ಟು ಹಣದ ಬಿಡುಗಡೆಯಾಗಿರುತ್ತದೆ. ಅದೇ ರೀತಿಯಲ್ಲಿ ನಾವು 2007 ರಿಂದ

2011ರವರೆಗೆ ಹೆಚ್ಚಿನ ಮಟ್ಟದಲ್ಲಿ ಬಿಡುಗಡೆಯಾಗಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಗೆ ಯುನೈಟೆಡ್ ಅನುದಾನದ ಖರ್ಚನ್ನು ಗಮನಿಸಬಹುದು.

**ಕೋಷ್ಟಕ 4.22: ಮಂಗಳೂರು ಮಹಾನಗರ ಪಾಲಿಕೆಗೆ ಯುನೈಟೆಡ್ ಅನುದಾನದ ಖರ್ಚು**

| ಅವಧಿ | ಖರ್ಚು (ಲಕ್ಷ ರೂ.) | ಬೆಳವಣಿಗೆ ದರ (ಶೇ.) |
|---|---|---|
| 2005-06 | 327.04 | - |
| 2006-07 | 594.60 | 81.81 |
| 2007-08 | 1792.20 | 201.41 |
| 2008-09 | 1394.61 | -22.21 |
| 2009-10 | 1816.71 | 30.27 |
| 2010-11 | 1533.69 | - |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಯ ಯುನೈಟೆಡ್ ಅನುದಾನದಿಂದ ಆಗಿರುವಂತಹ ಖರ್ಚನ್ನು ಕೋಷ್ಟಕ 4.22ರಲ್ಲಿ ಗಮನಿಸಬಹುದು. 2005-06ರಲ್ಲಿ 327.04 ಲಕ್ಷರೂಪಾಯಿಗಳಷ್ಟು ಖರ್ಚಾಗಿದೆ. ಅದೇ ರೀತಿಯಲ್ಲಿ 2006-07ರಲ್ಲಿ ಹೆಚ್ಚಿನ ಮಟ್ಟಿಗೆ ಖರ್ಚು ಮಾಡಿ 594.60 ಲಕ್ಷ ರೂಪಾಯಿಯಾಗಿತ್ತು. 2007-08 ಮತ್ತು 2008-09ದ ನಡುವಣ ಹೋಲಿಕೆ ಮಾಡುವಾಗ ನೇಥ್ಯರ್ತಕವಾಗಿ ಖರ್ಚು ಕಂಡು ಬರುತ್ತದೆ. 2010-11ರಲ್ಲಿ 1533.69ರೂ.ಲಕ್ಷಗಳಷ್ಟು ಖರ್ಚು ನಡೆದಿರುವುದನ್ನು ಗಮನಿಸಬಹುದು.

ಮಂಗಳೂರು ಮಹಾನಗರ ಪಾಲಿಕೆಗೆ 12ನೇ ಮತ್ತು 13ನೇ ಹಣಕಾಸು ಆಯೋಗದಿಂದ ರಸ್ತೆ ಮತ್ತು ಸೇತುವ ನಿರ್ಮಾಣಕ್ಕೆ ದೊರೆತ ಅನುದಾನ, ಅದರ ಖರ್ಚು ಮತ್ತು ಶೇಷವನ್ನು ಕೋಷ್ಟಕದಲ್ಲಿ 4.23ರಲ್ಲಿ ಗಮನಿಸಬಹುದು.

**ಕೋಷ್ಟಕ-4.23: ಮಂಗಳೂರು ಮಹಾನಗರ ಪಾಲಿಕೆಗೆ 12ನೇ ಮತ್ತು 13ನೇ ಹಣಕಾಸು ಆಯೋಗದಿಂದ ಅನುದಾನಗಳು (ರಸ್ತೆ ಮತ್ತು ಸೇತುವೆ ನಿರ್ಮಾಣಕ್ಕೆ)**

| ಅವಧಿ | ಅನುದಾನಗಳ ಬಿಡುಗಡೆ (ಲಕ್ಷ ರೂಪಾಯಿ) | ಬೆಳವಣಿಗೆಯ ದರ (ಶೇ.) | ಖರ್ಚುಗಳು (ಲಕ್ಷ ರೂಪಾಯಿ) | ಬೆಳವಣಿಗೆಯ ದರ (ಶೇ.) | ಶೇಷ (ಲಕ್ಷ ರೂಪಾಯಿ) |
|---|---|---|---|---|---|
| 2006-07 | 173.00 | - | 172.08 | - | 0.92 |
| 2007-08 | 173.00 | 0 | 165.65 | -3.73 | 7.35 |
| 2008-09 | 173.00 | 0 | 167.27 | 0.97 | 5.73 |
| 2009-10 | 86.00 | -50.28 | 35.77 | -78.61 | 50.73 |
| 2010-11 | 369.36 | - | -- | -- | 369.36 |

*ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ*

ಮಂಗಳೂರು ಮಹಾನಗರ ಪಾಲಿಕೆಗೆ 2006-07ರಲ್ಲಿ 173 ಲಕ್ಷರೂಪಾಯಿಗಳ ಅನುದಾನ ಬಿಡುಗಡೆಯಾಗಿ, 172.08ರಷ್ಟು ಖರ್ಚಾಗಿ 0.92 ಲಕ್ಷ ರೂಪಾಯಿಗಳಷ್ಟು ಶೇಷ ಪಾಲಿಕೆಯ ಖಜಾನೆಯಲ್ಲಿರುವುದನ್ನು ನೋಡುತ್ತೇವೆ. ಅದೇ ರೀತಿಯಲ್ಲಿ 2007-08ರಲ್ಲಿ 173.00 ಲಕ್ಷ ರೂಪಾಯಿಗಳಷ್ಟು ಬಿಡುಗಡೆಯಾಗಿ, 165.65 ಲಕ್ಷರೂಪಾಯಿ ಖರ್ಚಾಗಿ ರೂ.7.35 ಲಕ್ಷದಷ್ಟು ಹಣವು ಪಾಲಿಕೆಯಲ್ಲಿ ಉಳಿದಿರುತ್ತದೆ. ಆದರೆ ಇದು 2009-10ರಲ್ಲಿ ಅನುದಾನವು 86.00 ಲಕ್ಷ ರೂಪಾಯಿಯಷ್ಟು ಬಿಡುಗಡೆ ಹೊಂದಿ, ರೂ. 35.77 ಲಕ್ಷದಷ್ಟು ಖರ್ಚಾಗಿ ಪಾಲಿಕೆಯ ಖಜಾನೆಯಲ್ಲಿ 50.73 ಲಕ್ಷ ರೂಪಾಯಿ ಉಳಿದಿರುವುದನ್ನು ಗಮನಿಸಬಹುದು. ಮಂಗಳೂರು ಮಹಾನಗರ ಪಾಲಿಕೆಗೆ ಮುಖ್ಯ ಮಂತ್ರಿ ನಿಧಿಯಿಂದ ದೊರೆತ ಹಣ, ಅದರ ಹಂಚುವಿಕೆ, ಬಿಡುಗಡೆ, ಖರ್ಚು, ಉಪಯೋಗ ಮತ್ತು ಶೇಷವನ್ನು ಕೋಷ್ಟಕ 4.24ರಲ್ಲಿ ಗಮನಿಸಿಬಹುದು.

**ಕೋಷ್ಟಕ -4.24: ಮಂಗಳೂರು ಮಹಾನಗರ ಪಾಲಿಕೆಗೆ ಮುಖ್ಯ ಮಂತ್ರಿಯವರ ನಿಧಿಯಿಂದ ಬಂದ ಹಣ, ಅದರ ಹಂಚುವಿಕೆ, ಬಿಡುಗಡೆ, ಖರ್ಚು, ಶೇಷ ಮತ್ತು ಉಪಯೋಗ**

| ಅವಧಿ | ಹಣದ ಹಂಚುವಿಕೆ (ರೂ.ಲಕ್ಷಗಳಲ್ಲಿ) | ಹಣದ ಬಿಡುಗಡೆ (ರೂ.ಲಕ್ಷಗಳಲ್ಲಿ) | ಖರ್ಚು (ರೂ.ಲಕ್ಷಗಳಲ್ಲಿ) | ಶೇಷ (ರೂ.ಲಕ್ಷಗಳಲ್ಲಿ) | % ಹಣದ ಉಪಯೋಗ |
|---|---|---|---|---|---|
| 2008-09 | 5000.00 | 1700.00 | 1697.60 | 2.40 | 99.89% |
| 2009-10 | 5000.00 | 4800.00 | 4800.00 | 0.00 | 95.56% |
| 2010-11 | -- | 2100.00 | 1601.19 | 498.81 | -- |

ಮೂಲ: ಮಂಗಳೂರು ಮಹಾನಗರ ಪಾಲಿಕೆಯ ವಾರ್ಷಿಕ ವರದಿ

2008-11 ರವರೆಗೆ ಹಣದ ಹಂಚುವಿಕೆಯು 5000.00 ಲಕ್ಷ ರೂಪಾಯಿಯಾಗಿತ್ತು. ಅದೇ ರೀತಿಯಲ್ಲಿ 2008-09 ರಲ್ಲಿ 1700.00 ಲಕ್ಷ ರೂಪಾಯಿ, 2009-10ರಲ್ಲಿ 4800 ಲಕ್ಷ ರೂಪಾಯಿ ಮತ್ತು 2010-11 ರಲ್ಲಿ 2100 ಲಕ್ಷ ರೂಪಾಯಿಗಳ ಹಣದ ಬಿಡುಗಡೆಯಾಗಿರುತ್ತದೆ.ಅದೇ ರೀತಿಯಲ್ಲಿ 2008-09 ರಲ್ಲಿ 1697.60 ಲಕ್ಷ ರೂಪಾಯಿಗಳ ಖರ್ಚಾಗಿದ್ದರೆ 2010-11ರಲ್ಲಿ 1601.19 ಲಕ್ಷ ರೂಪಾಯಿಗಳಷ್ಟು ಖರ್ಚಾಗಿರುತ್ತದೆ. 2010-11ರಲ್ಲಿ 498.81 ಲಕ್ಷ ರೂಪಾಯಿಗಳ ಹಣದ ಶೇಷವು ಪಾಲಿಕೆಯಲ್ಲಿರುವುದನ್ನು ಗಮನಿಸಬಹುದು. ಅದೇ ರೀತಿಯಲ್ಲಿ ಶೇಕಡಾ 90.0ರ ಮೇಲೆ ಹಣದ ಉಪಯೋಗವಾಗಿರುವುದನ್ನು ಗಮನಿಸಬಹುದು.

## ವಿತ್ತೀಯ ನಿರ್ವಹಣೆಯ ಕುರಿತು ಸದಸ್ಯರ ಅಭಿಪ್ರಾಯ

ಮಂಗಳೂರು ನಗರಪಾಲಿಕೆಯಲ್ಲಿ ವಿತ್ತೀಯ ನಿರ್ವಹಣೆಯ ಕುರಿತು ಪಾಲಿಕೆಯ ಸದ್ಯಸರ ಅಭಿಪ್ರಾಯವನ್ನು ವಿಶ್ಲೇಷಣೆ ಮಾಡಲಾಯಿತು. ಇದಕ್ಕಾಗಿ 60 ಮಹಾನಗರ ಪಾಲಿಕೆಯ ಸದ್ಯಸರಲ್ಲಿ 15 ಸದಸ್ಯರನ್ನು ಸಂಪರ್ಕಿಸಿ ಅವರ ಅಭಿಪ್ರಾಯವನ್ನು ಸಂಗ್ರಹಿಸಲಾಯಿತು ಹಾಗೂ ಇದರ ವಿವರವನ್ನು ಕೋಷ್ಟಕ 4.25ರಲ್ಲಿ ಕೊಡಲಾಗಿದೆ.

**ಕೋಷ್ಟಕ 4.25: ವಿತ್ತೀಯ ನಿರ್ವಹಣೆ ಕುರಿತು ಸದಸ್ಯರ ಅಭಿಪ್ರಾಯ**

| ಸೂಚಕಗಳು | ಉತ್ಕೃಷ್ಟ (4) | ಅತ್ಯುತ್ತಮ (3) | ಉತ್ತಮ (2) | ಸಾಧಾರಣ (1) | ಏನೂ ಇಲ್ಲ (0) | ಸರಾಸಾರಿ ಅಂಶಗಳು (10) |
|---|---|---|---|---|---|---|
| ಕೇಂದ್ರ ಸರ್ಕಾರದ ಅನುದಾನಗಳ ವಿನಿಯೋಗ | 12 | 03 | -- | -- | -- | 5.70 |
| ರಾಜ್ಯ ಸರಕಾರದ ಅನುದಾನಗಳ ವಿನಿಯೋಗ | 11 | 04 | -- | -- | -- | 5.60 |
| ತೆರಿಗೆ ಸಂಗ್ರಹ | 10 | 04 | 01 | -- | -- | 5.40 |
| ಕಾರ್ಯಕ್ರಮ ಯೋಜನೆಯ ಕುರಿತು | 05 | 04 | 03 | 03 | -- | 4.1 |
| ಸ್ವತುಗಳ ನಿರ್ಮಾಣ | 04 | 05 | 02 | 04 | -- | 3.9 |
| ವೆಚ್ಚದ ಪರಿಣಾಮ | 05 | 04 | 04 | 02 | -- | 4.2 |
| ಆದಾಯ | 03 | 02 | 02 | 08 | -- | 3.0 |

ಸಂಖ್ಯಾಶಾಸ್ತ್ರದ ಪಂಡಿತ ಲಿಕರ್ಟ್ಸ್‌ರವರ ಐದು ಅಂಕಗಳ ವಿಶ್ಲೇಷಣಾ ವಿಧಾನವನ್ನು ಅಳವಡಸಿ ಅಭಿಪ್ರಾಯ ವಿಶ್ಲೇಷಣೆಯನ್ನು ಮಾಡಲಾಯಿತು. ಇದರಂತೆ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರದ ಅನುದಾನಗಳ ವಿನಿಯೋಗದ ಕುರಿತು ಸದಸ್ಯರಲ್ಲಿ ಉತ್ತಮ ಅಭಿಪ್ರಾಯವಿದೆ. ಇದನ್ನು ಸರಸಾರಿ ಅಂಕಗಳಲ್ಲಿ ಹೇಳುವುವಾದರೆ 5.70 ಮತ್ತು 5.60ರಷ್ಟು ಇದೆ. ಹೆಚ್ಚಿನ ಸದಸ್ಯರ ಅಭಿಪ್ರಾಯದಂತೆ ಮಹಾನಗರ ಪಾಲಿಕೆಗಳಿಗೆ ಬರುವ ಆದಾಯ ಕಡಿಮೆ ಹಾಗೂ ಸ್ವತ್ತುಗಳ ನಿರ್ವಹಣೆಯಲ್ಲಿ ಹೆಚ್ಚಿನ ಜಾಗ್ರತೆ ವಹಿಸಬೇಕಾದ ಅವಶ್ಯಕತೆಯಿದೆ.

ಒಟ್ಟಿನಲ್ಲಿ ಜಿಲ್ಲಾ ಪಂಚಾಯತ್ ಹಾಗೂ ನಗರಾಡಾಳಿತ ಸಂಸ್ಥೆಗಳ ವಿತ್ತೀಯ ನಿರ್ವಹಣೆಯ ಸಾರ್ವಜನಿಕ ಹಣಕಾಸು ಉಪಯೋಗದ ಕೃಷಿಯಂತ ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಇದರಂತೆ ಅವುಗಳಿಗೆ ಬರುವ ಆದಾಯ, ವೆಚ್ಚ ಅನುದಾನ ಹಾಗೂ ಅವುಗಳ ವಿನಿಯೋಗದ ವಿಶ್ಲೇಷಣೆಯಿಂದ, ಆಯಾಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯ ರೀತಿ ನೀತಿಗಳು ತಿಳಿದು ಬರುತ್ತದೆ. ಮಂಗಳೂರು ಪ್ರದೇಶದಲ್ಲಿ ಕಂಡು ಬಂದ ರೀತಿ ಇತರ ಪ್ರದೇಶಗಳಲ್ಲಿರಬೇಕೆಂದಿಲ್ಲ.ಆದ್ದರಿಂದ, ಇತರ ಪ್ರದೇಶಗಳಲ್ಲೂ ಈ ರೀತಿಯ ವಿಶ್ಲೇಷಣೆ ಮಾಡೀ ವಿತ್ತೀಯ ನಿರ್ವಹಣೆಯ ನಿಯಮಗಳನ್ನು ರೂಪಿಸುವುದು ಅಗತ್ಯವಿದೆ. ಬಹುಷಃ ಈ ಕುರಿತು ಸಾಮಾನ್ಯ ಜನರ ಅಭಿಪ್ರಾಯವನ್ನು ಸಂಗ್ರಹಿಸಿ ವಿಶ್ಲೇಷಿಸಿದರೆ ಇನ್ನೂ ಉತ್ತಮ.

ಅಧ್ಯಾಯ –5

# ಸಾರಾಂಶ ಮತ್ತು ಸಮಾಪ್ತಿ

- ಪೀಠಿಕೆ
- ಫಲಿತಾಂಶಗಳು
- ಭವಿಷ್ಯದಲ್ಲಿ ಸಂಶೋಧನೆಗೆ ದಿಕ್ಸೂಚಿ
- ಸಮಾಪ್ತಿ

## ಪೀಠಿಕೆ

ಅಭಿವೃದ್ಧಿ ಚಿಂತನೆಗಳು ಅನೇಕ ಹೊಸ ಹೊಸ ಪರಿಕಲ್ಪನೆಗಳನ್ನು ಹುಟ್ಟು ಹಾಕಿದೆ. ಅಭಿವೃದ್ಧಿಯಲ್ಲಿ ಪರಿಸರದ ಮಹತ್ವವನ್ನು ಪರಿಗಣಿಸಿದ ಮೇಲೆ 'ಸಹ್ಯ ಅಭಿವೃದ್ಧಿ' ಪರಿಕಲ್ಪನೆ ಹುಟ್ಟಿಕೊಂಡಿತು. ಅವಸರದಲ್ಲಿ ಅಭಿವೃದ್ಧಿ ಹೇತುವಿನಲ್ಲಿ ಸಂಪನ್ಮೂಲಗಳನ್ನು ಅತಿಯಾಗಿ ಬಳಸುವುದು ಪರಿಸರ ಅಸಮತೋಲನಕ್ಕೆ ಕಾರಣವಾಗುತ್ತದೆ. ಇದರಿಂದ ಮಾನವ ಭೂಮಿಯಲ್ಲಿ ಬದುಕುವುದೇ ಕಷ್ಟವಾಗಬಲ್ಲ ಪರಿಣಾಮಗಳನ್ನು ತಿಳಿದು ಈ ಜಾಗ್ರತಿ ಉಂಟಾಯಿತು. ಪರಿಸರ ಸಂರಕ್ಷಣೆಯ ಅಭಿವೃದ್ಧಿ ರೀತಿಯನ್ನು ಕಂಡುಕೊಳ್ಳುವುದಕ್ಕೆ ಪ್ರಾರಂಭವಾಯಿತು.

ಅಭಿವೃದ್ಧಿಗೆ ಸಂಪನ್ಮೂಲಗಳ ಲಭ್ಯತೆಯೇ ಮುಖ್ಯ ಕಾರಣವಾದರೂ, ಸಂಪನ್ಮೂಲಗಳ ಬಳಕೆಯ ರೀತಿಯಲ್ಲಿ ಪ್ರಾಮುಖ್ಯ ಎಂದು ತಿಳಿಯಲಾಯಿತು. ಇದಕ್ಕಾಗಿ ಮಾನವ ಸಂಪನ್ಮೂಲ ಹೆಚ್ಚು ಪ್ರದಾನ್ಯತೆಯನ್ನು ಪಡೆಯಿತು. ಎಲ್ಲಾ ಸಂಪನ್ಮೂಲಗಳನ್ನು ಬಳಸುವ ರೀತಿ ಮಾನವ ಸಂಪನ್ಮೂಲದ ಗುಣಮಟ್ಟವನ್ನು ಅವಲಂಭಿಸಿದೆ ಎಂದು ತಿಳಿಯಲಾಯಿತು. ಆದ್ದರಿಂದಲೇ, ಶಿಕ್ಷಣ, ತರಬೇತಿ, ಸಂಸ್ಕೃತಿ ಮಾನವ ಸಂಪನ್ಮೂಲಗಳನ್ನು ವೃದ್ಧಿಸುವ ಅಂಶಗಳು ಪ್ರಾಮುಖ್ಯತೆಯನ್ನು ಪಡೆಯಿತು. ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಕೃತಿಯ ಪಾತ್ರಗಳನ್ನು ಪರಿಗಣಿಸಲಾಯಿತು. ಈ ಎಲ್ಲಾ ಕಾರಣಗಳಿಂದ ಅಭಿವೃದ್ಧಿಯಲ್ಲಿ ಸಂಸ್ಥೆಗಳ ಪಾತ್ರವೂ ಪ್ರಮುಖವಾಗುತ್ತದೆ.

ಪ್ರಜಾಪ್ರಭುತ್ವ, ವಿಕೇಂದ್ರೀಕೃತ ಅಭಿವೃದ್ಧಿ ಸಿದ್ಧಾಂತ, ಅಭಿವೃದ್ಧಿಯಲ್ಲಿ ಸ್ಥಳೀಯ ಜನರ ಪಾಲ್ಗೊಳ್ಳುವಿಕೆಗಳು ಜನಪ್ರಿಯವಾದಂತೆ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುವಂತೆ ಆಯಿತು.ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳು ಪಾಲ್ಗೊಳ್ಳುವುದು ಭಾರತ ದೇಶದಲ್ಲಿ ಹಿಂದಿನಿಂದಲೂ ನಡೆದು ಬಂದಿದೆ. ಅದಕ್ಕೆ ಒಂದು ಇತಿಹಾಸವೇ ಇದೆ. ಹಿಂದಿನ ಕಾಲದಲ್ಲಿ ಈ ಸಂಸ್ಥೆಗಳು ಹಳ್ಳಿಯ ಪ್ರಮುಖ ಮನೆತನಗಳು ಸೇರಿ ರೂಪುಗೊಳ್ಳುತಿದ್ದವು. ಸಾರ್ವಜನಿಕ ಸೌಲಭ್ಯಗಳ ವ್ಯವಸ್ಥೆ ಮಾಡುವುದು ನ್ಯಾಯ ಒದಗಿಸುವುದು, ಸ್ಥಳೀಯವಾಗಿ ಅಭಿವೃದ್ಧಿ ಪೂರಕ ಕೆಲಸಗಳನ್ನು ಕೈಗೊಳ್ಳುವುದು–ಈ ಸಂಸ್ಥೆಗಳ ಮುಖ ಪಾತ್ರವಾಗಿತ್ತು. ಬಳಿಕ ಹಂತ ಹಂತವಾಗಿ, ಸ್ಥಳೀಯ ಸಂಸ್ಥೆಗಳ ಪಾತ್ರ ಬದಲಾಗುತ್ತಾ ಈಗ ಈ ಸಂಸ್ಥೆಗಳು ಸಾಂಸ್ಥಿಕ ಹಾಗೂ ಸಂಘಟನಾತ್ಮಕ ಸಿದ್ಧಾಂತಗಳಂತೆ ಹೆಚ್ಚು ವೈಜ್ಞಾನಿಕವಾಗಿ ಕಾರ್ಯನಿರ್ವಹಿಸುತ್ತಿವೆ.

ಭಾರತದಲ್ಲಿ ಸ್ವಾತಂತ್ರ್ಯ ಸಿಕ್ಕಿದ ಬಳಿಕ, ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಈ ಸಂಸ್ಥೆಗಳ ರಚನೆ, ಕಾರ್ಯ ವೈಖರಿ ಹಾಗೂ ಪಾತ್ರಗಳನ್ನು ಹೆಚ್ಚು ಪರಿಷ್ಕರಿಸಿ ಸುಧಾರಿಸಲಾಯಿತು. ಗ್ರಾಮೀಣ ಪ್ರದೇಶದಲ್ಲಿ ಪಂಚಾಯತ್ ಸಂಸ್ಥೆಗಳು ಹಾಗೂ ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳು ವೈಜ್ಞಾನಿಕವಾಗಿ ರೂಪುಗೊಂಡವು. ಇತೀಚೆಗೆ ಈ ಸಂಸ್ಥೆಗಳು ಸ್ಥಳೀಯ ಅಭಿವೃದ್ಧಿಯಲ್ಲಿ ಹೆಚ್ಚು ಜವಾಬ್ದಾರಿಯನ್ನು ಹೊಂದಿವೆ. ಅಭಿವೃದ್ಧಿ ಕಾರ್ಯದಲ್ಲಿ ಹಣದ ವಿನಿಯೋಗ ಈ ಸಂಸ್ಥೆಗಳಿಂದ ಆಗುತ್ತಿದೆ. ಆದ್ದರಿಂದಲೇ ಈ ಸಂಸ್ಥೆಗಳ ಅಭಿವೃದ್ಧಿ ಪಾತ್ರವನ್ನು ಆರ್ಥಿಕ ದೃಷ್ಟಿಯಿಂದ ವಿಶ್ಲೇಷಿಸುವ ಸಂದರ್ಭ ಬಂದಿದೆ.

ಇದರಂತೆ ಈ ಅಧ್ಯಯನದಲ್ಲಿ ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆಯ ವಿಶ್ಲೇಷಣೆಯನ್ನು ಮಂಗಳೂರು ತಾಲೂಕಿನಲ್ಲಿ ಮಾಡಲಾಯಿತು. ಸ್ಥಳೀಯ ಸಂಸ್ಥೆಗಳ ಆದಾಯ ವೆಚ್ಚ, ಬಂಡವಾಳ ಹೂಡಿಕೆ, ಸಾರ್ವಜನಿಕ ಸೌಲಭ್ಯ ವ್ಯವಸ್ಥೆ ಕಲ್ಪಿಸುವ ರೀತಿಯನ್ನು ತಿಳಿಯುವುದೇ ಈ ಅಧ್ಯಯನದ ಉದ್ದೇಶ. ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಹಾಗೂ ಮಂಗಳೂರು ಮಹಾನಗರ ಪಾಲಿಕೆಯ ವಿತ್ತೀಯ ನಿರ್ವಹಣೆಯ ಆಂಶಗಳನ್ನು ವಿಶ್ಲೇಷಿಸಲಾಯಿತು.

## ಫಲಿತಾಂಶಗಳು

ಈ ಅಧ್ಯಯನದಲ್ಲಿ ಕಂಡು ಬಂದ ಪ್ರಮುಖ ಸಂಶೋಧನಾ ಫಲಿತಾಂಶಗಳೆಂದರೆ,

- ಸ್ಥಳೀಯ ಸಂಸ್ಥೆಗಳು, ಸ್ಥಳೀಯ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ
- ಮುಖ್ಯವಾಗಿ ಸ್ಥಳೀಯರಿಗೆ ಬೇಕಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ಇವುಗಳ ಪಾತ್ರ ಮಹತ್ವವಾಗಿದೆ
- ಶಿಕ್ಷಣ, ಆರೋಗ್ಯ, ಸಾರಿಗೆ, ಮಾರ್ಗ, ದಾರಿದೀಪ, ಕುಡಿಯುವ ನೀರು, ಚರಂಡಿ ವ್ಯವಸ್ಥೆಗಳನ್ನು ಸ್ಥಳೀಯ ಸಂಸ್ಥೆಗಳು ನಿರ್ವಹಿಸುತ್ತವೆ.
- ಪಂಚಾಯತ್ ರಾಜ್ ಸಂಸ್ಥೆಗಳು ಹೆಚ್ಚು ಹೆಚ್ಚು ಅನುದಾನಗಳನ್ನು ಪಡೆಯುತ್ತವೆ. ವಿವಿಧ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸುವಲ್ಲಿ ಮಹತ್ತರ ಪಾತ್ರವಹಿಸುತ್ತವೆ.
- ನಗರಾಡಳಿತ ಸ್ಥಳೀಯ ಸಂಸ್ಥೆಗಳಲ್ಲಿ ಮುಖ್ಯವಾಗಿ ಮಹಾನಗರ ಪಾಲಿಕೆ, ಪುರಸಭೆ ಮತ್ತು ನಗರ ಪಂಚಾಯತ್‌ಗಳು ಆಗಿರುತ್ತದೆ
- ಈ ಸಂಸ್ಥೆಗಳು ಕೇಂದ್ರ ರಾಜ್ಯ ಸರಕಾರದ ಅನುದಾನಗಳೊಂದಿಗೆ, ಸ್ಥಳೀಯ ತೆರಿಗೆ ಸಂಗ್ರಹ ಮತ್ತು ತಮ್ಮದೇ ಆಸ್ತಿಗಳಿಂದ ಆದಾಯವನ್ನು ಪಡೆಯುತ್ತವೆ
- ಮಂಗಳೂರು ಮಹಾನಗರಪಾಲಿಕೆಯಲ್ಲಿ ಸುಮಾರು 60 ಜನಪ್ರತಿನಿಧಿಗಳು ಪ್ರಜಾಪ್ರಭುತ್ವದಂತೆ ಆಯ್ಕೆ ಆಗಿರುತ್ತಾರೆ.

## ಭವಿಷ್ಯದಲ್ಲಿ ಸಂಶೋಧನೆಗೆ ದಿಕ್ಸೂಚಿ

ಸ್ಥಳೀಯ ಸಂಸ್ಥೆಗಳ ಕುರಿತು ಸಂಶೋಧನೆಗೆ ಬಹಳಷ್ಟು ಅವಕಾಶ ಹಾಗೂ ಅಗತ್ಯವಿದೆ. ಈ ಅಧ್ಯಯನದಲ್ಲಿ ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ ಕುರಿತು ವಿಶ್ಲೇಷಣೆ ಮಾತ್ರ ಮಾಡಲಾಗಿದೆ. ಆದರಲ್ಲೂ ಈ ವಿತ್ತೀಯ ನಿರ್ವಹಣೆಯ ಕುರಿತು ನಿರ್ವಹಣಾ ಸಿದ್ಧಾಂತದ ಆಧಾರದಲ್ಲಿ ಇನ್ನೂ ಕೆಲವು ಸೂಚಕಗಳನ್ನು ಗುರುತಿಸಿ ಮಾಡುವುದು ಅಗತ್ಯವಿದೆ.

ಸ್ಥಳೀಯ ಸಂಸ್ಥೆಗಳ ಪಾತ್ರ, ಸಂಘಟನೆ, ಕಾರ್ಯ ವೈಖರಿ ಹಾಗೂ ಆರ್ಥಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸಮಸ್ತವಾದ ಸಂಶೋಧನೆ ಮಾಡುವ ಅಗತ್ಯವಿದೆ. ಇದರಿಂದಾಗಿ ಈ ಸಂಸ್ಥೆಗಳ ಸಂಘಟನಾ ಸಾಮಾರ್ಥ್ಯ, ಕಾರ್ಯ ದಕ್ಷತೆಗಳನ್ನು ಅಳತೆ ಮಾಡಬಹುದು. ಮಾತ್ರವಲ್ಲ, ಈ ಸಂಸ್ಥೆಗಳ ಕಾರ್ಯ ನಿರ್ವಹಣಾ ಸಾಮಾರ್ಥ್ಯವನ್ನು ಫಲಾನುಭವಿಗಳ ದೃಷ್ಟಿಯಿಂದಲೂ

ವಿಶ್ಲೇಷಣಾ ಮಾಡಬಹುದು. ಸಾಂಸ್ಥಿಕ, ಮೌಲ್ಯಗಳ ಆಧಾರದಲ್ಲಿ ಜನರ ಉಪಯೋಗದ ದೃಷ್ಟಿಯಿಂದ ಈ ಸಂಸ್ಥೆಗಳ ಪಾತ್ರವನ್ನು ವಿಶ್ಲೇಷಿಸಬೇಕಾಗಿದೆ.

ಆರ್ಥಿಕವಾಗಿ, ಕಾರ್ಯಕ್ರಮಗಳ ಯೋಜನೆ ಅನುಷ್ಠಾನ, ಸಂಪನ್ಮೂಲಗಳ ಬಳಕೆ, ಈ ಕಾರ್ಯಕ್ರಮಗಳ ಪರಿಣಾಮಗಳನ್ನು ವಿಶ್ಲೇಷಿಬೇಕಾಗಿದೆ. ಸ್ಥಳೀಯ ಸಂಸ್ಥೆಗಳ ಕುರಿತು ಸಮಗ್ರ ಪರಿಶೋಧನೆಯಿಂದ ಅವುಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಸಹಾಯವಾಗಬಹುದು. ಜನರ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳಲು ಒಳ್ಳೆಯ ವಾತಾವರಣ ನಿರ್ಮಾಣಕ್ಕೆ ಅನುಕೂಲವಾಗಬಹುದು.

## ಸಮಾಪ್ತಿ:

ಅಭಿವೃದ್ಧಿಯಿಂದ ಮಾನವ ಯೋಗಕ್ಷೇಮಕ್ಕಾಗಿ ಸಂಸ್ಥೆಗಳನ್ನು ನಿರ್ಮಿಸುವುದು ಒಂದು ಸಂಸ್ಕೃತಿಯೇ ಆಗಿದೆ. ಸಮಾಜ ಜೀವಿಯಾದ ಮನುಷ್ಯ ಸಾಂಘಿಕಿಕ ಅಭಿವೃದ್ಧಿ ಪ್ರಯತ್ನದಲ್ಲಿ ಬರುವ ತೊಡಕುಗಳನ್ನು ನಿರ್ವಹಿಸಲು ಸಂಸ್ಥೆಗಳನ್ನು ನಿರ್ಮಿಸುತ್ತಾನೆ. ಸಂಸ್ಥೆಗಳು ಮಾನವ ವಿನಿಮಯ ಕ್ರಿಯೆಗೆ ಒಂದು ಚೌಕಟ್ಟನ್ನು ಒದಗಿಸುತ್ತದೆ. ನೀತಿ ನಿಯಮಗಳ ಆಯಾಮವನ್ನು ಒದಗಿಸುತ್ತದೆ. ಈ ದೃಷ್ಟಿಯಿಂದ ಸಂಸ್ಥೆಗಳನ್ನು ನಿರ್ಮಿಸುವುದು ನಾಗರಿಕತೆಯ ಒಂದು ಲಕ್ಷಣವೇ ಹೌದು. ಇದರಂತೆ ಮಾನವನು ಅನೇಕ ಸಂಸ್ಥೆಗಳನ್ನು ನಿರ್ಮಿಸಿ, ವ್ಯವಹಾರ ಸುಸೂತ್ರವಾಗಲು ನೆರವು ಪಡೆದಿರುತ್ತಾನೆ. ಆರ್ಥಿಕಾಭಿವೃದ್ಧಿಯ ದೃಷ್ಟಿಕೋನದಿಂದ ಅಧುನಿಕ ಯುಗದಲ್ಲಿ ನಾವು ನಿರ್ಮಿಸಿಕೊಂಡಿರುವ ಅನೇಕ ಸಂಸ್ಥೆಗಳನ್ನು ನಾವು ಕಾಣಬಹುದು. ಸರಕಾರ, ಸರಕಾರೇತರ, ವಾಣಿಜ್ಯ, ರಾಷ್ಟ್ರೀಯ, ಅಂತರಾಷ್ಟ್ರೀಯ... ಹೀಗೆ ಅನೇಕ ಸಂಸ್ಥೆಗಳು ಅಭಿವೃದ್ಧಿಗಾಗಿ ಕೆಲಸ ಮಾಡುತ್ತಿವೆ.

ಸ್ಥಳೀಯ ಸಂಸ್ಥೆಗಳು ಸ್ಥಳೀಯ ಅಭಿವೃದ್ಧಿಗೆ ಸಹಕಾರಿ ಎಂದು ತಿಳಿದುಕೊಳ್ಳಲಾಯಿತು. ಭಾರತದಂತಹ ಗ್ರಾಮೀಣ ಪ್ರಧಾನ ರಾಷ್ಟ್ರಗಳಲ್ಲಿ ಈ ರೀತಿಯ ವಿಕೇಂದ್ರಿಕೃತ ಅಭಿವೃದ್ಧಿ ಸೂತ್ರ ಹೆಚ್ಚು ಸೂಕ್ತ ಮತ್ತು ಪರಿಣಾಮಕಾರಿ. ಐತಿಹಾಸಿಕವಾಗಿ, ಭಾರತದಲ್ಲಿ ತಳಮಟ್ಟದ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ ಮಹತ್ತ್ವವನ್ನು ಪಡೆದಿದೆ. ಸ್ವಾತಂತ್ರ್ಯ ಸಿಕ್ಕಿದ ಬಳಿಕ ಈ ಸಂಸ್ಥೆಗಳನ್ನು ಪರಿಷ್ಕರಿಸಿ ಹೆಚ್ಚು ಸೂಕ್ತವಾಗಿ ಕಾರ್ಯನಿರ್ವಹಿಸುವಂತೆ ನಿರೂಪಿಸಲಾಯಿತು.

ಗ್ರಾಮೀಣ ಪ್ರದೇಶದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಜನರ ಸಹಭಾಗಿತ್ವಕ್ಕೆ ಅನುಕೂಲವಾಗಿದೆ. ಪ್ರಜಾಪ್ರಭುತ್ವದ ಆಧಾರದಲ್ಲಿ, ಮೂರು ಹಂತಗಳಲ್ಲಿ – ಗ್ರಾಮ, ತಾಲೂಕು ಹಾಗೂ ಜಿಲ್ಲೆ , ಪ್ರಂಚಾಯತ್ ರಾಜ್ ಸಂಸ್ಥೆ ಜನರು ಅಭಿವೃದ್ಧಿಯಲ್ಲಿ ಪಾಲ್ಗೊಳ್ಳಲು ಒಂದು ವ್ಯವಸ್ಥೆ ಆಗಿದೆ. ೧೯೯೩ರಲ್ಲಿ ಪಂಚಾಯತ್ ರಾಜ್ ಮಸೂದೆಗೆ ೭೩ನೇ ತಿದ್ದುಪಡಿ ಬಂದ ಮೇಲೆ, ಈ ಸಂಸ್ಥೆಗಳು ಅಭಿವೃದ್ಧಿಯಲ್ಲಿ ಹೆಚ್ಚು' ಜವಾಬ್ದಾರಿ ಹೊಂದುವಂತಾಯಿತು. ಮಾತ್ರವಲ್ಲದೆ, ಹಣಕಾಸು ಸಂಗ್ರಹಿಸುವ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಜವಾಬ್ದಾರಿಯುತವಾಗಿ ವಿನಿಯೋಗಿಸುವಂತಾಯಿತು. ಇದರಿಂದಾಗಿಯೇ ಈ ಸಂಸ್ಥೆಗಳು ವಿತ್ತೀಯ ನಿರ್ವಹಣೆಯಲ್ಲಿ ಹೆಚ್ಚು ಸಮರ್ಥವಾಗಬೇಕಾಗಿದೆ. ಸಾರ್ವಜನಿಕ ಹಣಕಾಸು ನಿರ್ವಹಣೆಯಲ್ಲಿ ಹೆಚ್ಚು

ಸಮರ್ಥವಾಗಬೇಕಾಗಿದೆ. ಸಾರ್ವಜನಿಕ ಹಣಕಾಸು ನಿರ್ವಹಣೆಯ ನಿಯಮದಂತೆ ಸಾರ್ವಜನಿಕರಿಗೆ ಹೆಚ್ಚು ಅನುಕೂಲವಾಗುವ ಮೂಲಭೂತ ಸೌಕಯಗಳನ್ನು ಒದಗಿಸುವುದು ಮತ್ತು ಹೆಚ್ಚು ಅನುದಾನಗಳನ್ನು ಪಡೆದು ಸಮರ್ಥವಾಗಿ ವಿನಿಯೋಗಿಸುವುದು ಈ ಸಂಸ್ಥೆಗಳ ಜವಾಬ್ದಾರಿಯಾಗಿದೆ.

ನಗರ ಪ್ರದೇಶಗಳಲ್ಲೂ ಮಹಾನಗರ ಪಾಲಿಕೆ, ಪುರಸಭೆ ಹಾಗೂ ನಗರ ಪಂಚಾಯತ್‌ಗಳು ಸ್ಥಳೀಯ ಅಭಿವೃದ್ಧಿಯ ಜವಾಬ್ದಾರಿಯನ್ನು ಹೊಂದಿವೆ. ಈ ಸಂಸ್ಥೆಗಳ ಆದಾಯ ವೆಚ್ಚ ವಿಶ್ಲೇಷಣೆಯಿಂದ, ಅವುಗಳ ವಿತ್ತೀಯ ನಿರ್ವಹಣೆಯ ಸಾಮರ್ಥ್ಯವನ್ನು ನಾವು ತಿಳಿಯುಬಹುದು. ಈ ರೀತಿ ಸ್ಥಳೀಯ ಸಂಸ್ಥೆಗಳು ರಾಜಕೀಯವಾಗಿ ಹೆಚ್ಚು ಮಹತ್ತ್ವ ಪಡೆದಾಗ ಸಾರ್ವಜನಿಕ ಹಣಕಾಸು ನಿರ್ವಹಣೆಯ ಜಾಗೃತಿಯನ್ನು ಪರಿಶೀಲಿಸುವುದು ಅಗತ್ಯವಾಗುತ್ತದೆ.

***

# ಅಡಿಟಿಪ್ಪಣಿ

1. *"Wealth of Nations", Adam Smith ,1776.*
2. *"The General Theory of Income ,Employment and Output", 1936.*
3. *ಶಂಕರ್ ರಾವ್ (2010), "ಭಾರತೀಯ ಸಮಾಜ", ಜೈ ಭಾರತ್ ಪ್ರಕಾಶನ, ಮಂಗಳೂರು.*
4. *ಹೆಚ್.ವಿ.ನಾಗೇಶ್, "ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ", ಪುಟ 117ರ "ಪಂಚಾಯತ್ ರಾಜ್". "ಪಂಚಾಯತ್ ರಾಜ್" ಎಂಬುದು ಸ್ಥಳೀಯ ಸ್ವಯಂಮಾಡಳಿತ ವ್ಯವಸ್ಥೆಯನ್ನು ಸೂಚಿಸುವ ಪರಿಕಲ್ಪನೆಯಾಗಿದೆ. ಭಾರತೀಯ ಸನ್ನಿವೇಶದಲ್ಲಿ "ಪಂಚಾಯತ್ ರಾಜ್ ವ್ಯವಸ್ಥೆ" ಎಂಬುದು "ಪ್ರಜಾಸತ್ತಾತ್ಮಕ ಆಡಳಿತದ ವಿಕೇಂದ್ರೀಕರಣ ವ್ಯವಸ್ಥೆ" ಎಂದರೂ ಸಲ್ಲುವುದು. ಈ ಪರಿಕಲ್ಪನೆಯಂತೆ "ಗ್ರಾಮೀಣ ಭಾಗದ ಜನರು ತಮ್ಮ ಸಾಮೂಹಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಹೊಣೆಗಾರಿಕೆಯನ್ನು ತಾವೇ ಹೋರುವ ಒಂದು ವ್ಯವಸ್ಥೆಯಾಗಿದೆ. ಈ ವ್ಯವಸ್ಥೆಯ ಮೂಲಕ ಗ್ರಾಮೀಣ ಜನರು ತಮ್ಮ ವ್ಯವಹಾರಗಳನ್ನು ತಾವೇ ನೋಡಿಕೊಳ್ಳಲು ಅನುಕೂಲವಾಗುವುದು. ಈ ರೀತಿಯಲ್ಲಿ, ವಿಕೇಂದ್ರೀಕೃತ ಆಡಳಿತ ಮತ್ತು ಅಭಿವೃದ್ಧಿ ಕಾರ್ಯಗಳ ಯೋಜನೆಗಳಿಗೆ ಹೆಚ್ಚಿನ ಅನುವು ಮಾಡಿದ ರೀತಿಯಲ್ಲಿ ಮೂಡಿ ಬಂತು. ಅದೇ ರೀತಿಯಲ್ಲಿ ಮಹಿಳೆಯರಿಗೆ 33 ಶೇಕಡಾ ಮೀಸಲಾತಿ ಕೂಡ ಅನುಷ್ಠಾನಕ್ಕೆ ಬಂದಿರುವುದನ್ನು ವಿಮರ್ಶಿಸಬಹುದಾಗಿದೆ.*

# ಪರಾಮರ್ಶನ ಗ್ರಂಥಗಳು

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (ಗ್ರಾಮ ಪಂಚಾಯತ್, ತಾಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಅಧಿನಿಯಮ ನಂಬ್ರ 14,1993) ಪ್ರಕಾಶಕರು–ರಾವ್ ಪಬ್ಲಿಷರ್ಸ್ ಅಂಗಡಿ ನಂಬ್ರ 113 ಬಿ, ಸೆಂಟ್ರಲ್ ಮಾರ್ಕೇಟ್, ಭವಂತಿ ರಸ್ತೆ ಎದುರು, ಮಂಗಳೂರು.

ಎಚಾರ್ಕೆ (2008), 'ಆಧುನಿಕ ಭಾರತದ ಆರ್ಥಿಕತೆ', ಸಪ್ನ ಬುಕ್ ಹೌಸ್, ಬೆಂಗಳೂರು.

ಹೆಗ್ಗಡೆ ಡಿ ಒಡೆಯರ್, (2010): 'ಅಭಿವೃದ್ಧಿ ಅರ್ಥಶಾಸ್ತ್ರ', ಒಡೆಯರ್ ಪಬ್ಲಿಕೇಷನ್ಸ್, ಬೆಂಗಳೂರು.

ಎಚಾರ್ಕೆ (2008), "ಭಾರತದ ಆರ್ಥಿಕ ಅಭಿವೃದ್ಧಿ", ಸಪ್ನ ಬುಕ್ ಹೌಸ್, ಬೆಂಗಳೂರು.

ಕೃಷ್ಣಯ್ಯ ಗೌಡ ಎಚ್ ಆರ್ (1998), "ಕರ್ನಾಟಕದ ಅರ್ಥಶಾಸ್ತ್ರ", ಚೇತನ ಬುಕ್ ಹೌಸ್, ಮೈಸೂರು.

ಕೃಷ್ಣ ಬಿ.ಆರ್, (2010), "ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ", ವಿದ್ಯಾನಿಧಿ ಪ್ರಕಾಶನ, ಗದಗ.

ಜಯಶೀಲ ಮತ್ತು ಶೌಕತ್ ಆಲಿ, (2007), "ಮಹಿಳೆ ಮತ್ತು ಅಭಿವೃದ್ಧಿ", ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು.

ಶಿಶಿಲ ಪ್ರಭಾಕರ, (2008), "ಅಭಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ, ನವಿತಾ ಪ್ರಕಾಶನ, ಮೈಸೂರು.

ಶಂಕರ್ ರಾವ್ ಚ.ನ (2010), "ಭಾರತೀಯ ಸಮಾಜ", ಜೈ ಭಾರತ್ ಪ್ರಕಾಶನ, ಮಂಗಳೂರು.

ಬೋರಲಿಂಗಯ್ಯ ಹಿ.ಚಿ. (2006), "ಸುವರ್ಣ ಕರ್ನಾಟಕ ಸಂಪುಟ 1, ಅಭಿವೃದ್ಧಿ ಪಥ", ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ವಿನಾಯಕ ಅಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು.

ಅಮಿತಾವ್ ಮುಖರ್ಜಿ( 1994), "ಡಿಸೆಂಟ್ರಲೈಸೇಶನ್, ಪಂಚಾಯತ್ಸ್ ಇನ್ ದ ನೈಂಟೀಸ್", ನ್ಯೂಡೆಲ್ಲಿ, ವಿಕಾಸಪ್ರಿಂಟರ್ಸ್ .

ಆನಂದ ಅನ್ನನಾಥನ್(1994)ಕರ್ನಾಟಕ ಪಂಚಾಯತ್ಸ್ ಅಂಡರ್ ಅಡ್ಮಿ ನಿಸ್ಟ್ರೇಟರ್ಸ್, ನ್ಯೂಡೆಲ್ಲಿ, ಐ.ಎಸ್.ಎಸ್.

ಎಂ.ಉಮಾಪತಿ (1985) "ಎ ಹಿಸ್ಟರಿ ಆಫ್ ಲೋಕಲ್ ಸೇಲ್ಸ್ ಗವರ್ನಮೆಂಟ್ ಇನ್ ರೂರಲ್ ಕರ್ನಾಟಕ", ಮೈಸೂರು ಯುನಿವರ್ಸಿಟಿ.

ಕರ್ನಾಟಕ ಜಿಲ್ಲಾ ಪರಿಷತ್‌ಗಳು, ತಾಲೂಕು ಪಂಚಾಯತಿ ಸಮಿತಿಗಳು, ಮಂಡಲ ಪಂಚಾಯತಿಗಳು ಮತ್ತು ನ್ಯಾಯ ಪಂಚಾಯತಿಗಳು ಕಾಯ್ದೆ, 1987 ಕರ್ನಾಟಕ ಸರಕಾರ, ಬೆಂಗಳೂರು.

ಕರ್ನಾಟಕ ಪಂಚಾಯತ್ ರಾಜ್ ಕಾಯುದೆ, 1993, ಕರ್ನಾಟಕ ಸರಕಾರ ಬೆಂಗಳೂರು.

ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ, 1993 ತಜ್ಞರ ಸಮಿತಿಯ ವರದಿ, 1996, ಕರ್ನಾಟಕ ಸರಕಾರ ಬೆಂಗಳೂರು.

ಜಾಜ್ ಮ್ಯಾಥ್ಯೂ : ಫ್ರಮ್ ಲೆಜಿಸ್ಲೇಶನ್ ಟು ಮೂವ್‌ಮೆಂಟ್, ಕಾನ್ಸೆಪ್ಟ್ ನ್ಯೂಡೆಲ್ಲಿ.

ಜಾಜ್ ಮ್ಯಾಥ್ಯೂ(1993) "ಸ್ಟೇಟಸ್ ಆಫ್ ಪಂಚಾಯತಿ ರಾಜ್ ಇನ್ ಇಂಡಿಯನ್ ಸ್ಟೇಟ್ಸ್", ನ್ಯೂಡೆಲ್ಲಿ, ಐ.ಎಸ್.ಎಸ್.

ಪಂಚಾಯತ್‌ರಾಜ್ ಸಿಸ್ಟಮ್ ಇನ್ ಆ್ಯಕ್ಟ್ ಎಂಡ್ ಆ್ಯಕ್ಸನ್-ಫ್ರೆಂಡಿಂಗ್ಸ್ ಆಫ್ ಸೋಶಿಯೋ ಇಕಾನಮಿಕ್ ಸರ್ವೆ ಆಫ್ ಎಕ್ಕಾರ್ ಮಂಡಲ ಪಂಚಾಯತ್ ಏರಿಯಾ, ಎ ರಿಸರ್ಚ್ ಪ್ರಾಜೆಕ್ಟ್ ಅಂಡರ್ ಟೇಕನ್ ಬೈ ಎಸ್.ಡಿ.ಪಿ.ಟಿ ಫಸ್ಟ್ ಗ್ರೇಡ್ ಕಾಲೇಜು, ಕಟೀಲ್, ಡಿಸೆಂಬರ್, 1993

ಎಸ್.ಎಸ್.ಮೀನಾಕ್ಷಿ ಸುಂದರಂ: "ದ ಸೆವೆಂಟಿಥರ್ಡ್ ಕಾನ್‌ಸ್ಟಿಟ್ಯೂಷನ್ ಅಮೆಂಡ್‌ಮೆಂಟ್", ಎ ಕೇಸ್ ಫಾರ್ ಫರ್ದರ್ ಅಮೆಂಡ್‌ಮೆಂಟ್, ಜರ್ನಲ್ ಆಫ್ ರೂರಲ್ ಡೆವಲಪ್‌ಮೆಂಟ್.

Kalluraya Shripathi P, "Decentralisation and economic development –A comparative study of Karnataka and Kerala".UGC sponsored major research report,Department of Studies and Research in economics,Mangalore university,2007.

Participative Development (Avenue Disciplinary Research Journal) center for social research and development, Pune, ISSN-09762701, Vol. 9 No.1, Jan-June 2010

Margin-The Journal of Applied Economic Research 3:3 (2009): 223-242, Sage Publications DOI: 10.1177/097380100900300302
"Central Fiscal Transfers and States Own Revenue Efforts in India: Panel Data Models-Prasant Kumar Panda.

Anirban Kashyap : Panchaytiraj , Views of founding fathers and recommendation of different committees , New Delhi, Lancer Books, 1989 P 109

Ashok Mehta Committee : Government of India, Report of the Committee on Panchayati Raj Institutions, Ministry of Agriculture and Irrigation, Department of Rural Development, (New Delhi, 1978),

Anirban Kashyap : Panchaytiraj , Views of founding fathers and recommendation of different committees , New Delhi, Lancer Books, 1989 P 112

Douglass North, "Institutions", The journal on economic perspectives 5 (1) pp 97-112. 1991.

Mahoj Rai et al.: The state of Panchayats – A participatory perspective, New Delhi, Smscriti, 2001 P 9 .

Mahoj Rai et al.The state of Panchayats – A participatory perspective, New Delhi, Smscriti, 2001 P 7

The constitution (Seventy Third Amendment) Act, 1992, The Gazette of India, Ministry of Law, Justice and Company Affairs, New Delhi, 1993.

World Bank: Overview of ruraldecentralisation in indi Volume III World Bank, 2000 P 21

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2006–07.

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2007–08.

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2008–09.

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2009–10.

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2010–11.

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2011–12.

ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ 2012–13.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರ ಅನುದಾನದ ವಿವರ–2006–07.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರ ಅನುದಾನದ ವಿವರ–2007–08.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರ ಅನುದಾನದ ವಿವರ–2008–09.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರ ಅನುದಾನದ ವಿವರ–2009–10.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರ ಅನುದಾನದ ವಿವರ–2010–11.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರಅನುದಾನದ ವಿವರ-2011-12.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಒದಗಿಸಿರುವ ಯೋಜನೆ/ಯೋಜನೇತರ ಅನುದಾನದ ವಿವರ-2012-13.

ಮಂಗಳೂರು ಮಹಾನಗರಪಾಲಿಕೆ, ಆಯವ್ಯಯ ಅಂದಾಜು ಪಟ್ಟಿ -2006-07.

ಮಂಗಳೂರು ಮಹಾನಗರಪಾಲಿಕೆ, ಆಯವ್ಯಯ ಅಂದಾಜು ಪಟ್ಟಿ -2008-09.

ಮಂಗಳೂರು ಮಹಾನಗರಪಾಲಿಕೆ, ಆಯವ್ಯಯ ಅಂದಾಜು ಪಟ್ಟಿ -2009-10.

ಮಂಗಳೂರು ಮಹಾನಗರಪಾಲಿಕೆ, ಆಯವ್ಯಯ ಅಂದಾಜು ಪಟ್ಟಿ -2010-11.

ಮಂಗಳೂರು ಮಹಾನಗರಪಾಲಿಕೆ, ಆಯವ್ಯಯ ಅಂದಾಜು ಪಟ್ಟಿ -2011-12.

ಮಂಗಳೂರು ಮಹಾನಗರಪಾಲಿಕೆ, ಆಯವ್ಯಯ ಅಂದಾಜು ಪಟ್ಟಿ -2012-13.

ಅನುಬಂಧ -೧


Map of
Karnataka
Bidar
Gulbarga
Bijapur
Bagalkot
Raichur
Belgaum
Koppal
Dharwad
Bellary
Uttara
Kannada
Haveri
Davangere
Shimoga
Chitradurga
Udupi
Chikmagalur
Tumkur
Dakashin
Kannada
Hassan
Bangalore
Rural
Kolar
Bangalore
Kodagu
Mandya
Mysore
Chamrajnagar



Mangalore
NEW MANGALORE PORT
PANAMBUR
KUDREMUKH
IRON ORE LIMITED
TANIRBAVI
PADUKODI
KUNJATHBAIL
PANJIMOGARU
KULOOR
TO BAJAPE
TO AIR PORT
MARAKADA
MUDUSHEDDE
KULOOR KAVOOR ROAD
Bondel Road
KAVOOR
BAJPE ROAD
PACHANADY
BOLOOR
DEREBAIL
CROSS ROAD
BONDEL ROAD
KUDUPU
PADAVU
GOVT. BUS STAND
LAW COLLEGE
CANARA COLLEGE
ST. AGNES COLLEGE
Karkala Road
TO KUDUPU
MAROLI
NIRMARGA
ALAPE
Kankanady
F. M. HOSPITAL
KANKANADY
HASSAN
RAILWAY L
KANNARU
Pandeshwar Police Station
Morgan's Gate
Bolar Main Road
Mahakali Padpu
Jeppina Mogaru
BAJAL
HAREK
AMBALA MOGARU
MUNNURU
HOTEL SUMMER SANDS
ULLAL
PERMANNUR
MANGALORE UNIVERSITY
(KONAJE)

## ಅನುಬಂಧ -೨

### ಸ್ಥಳೀಯ ಸಂಸ್ಥೆಗಳ ವಿತ್ತೀಯ ನಿರ್ವಹಣೆ: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಅಧ್ಯಯನ

ಪ್ರಶ್ನಾವಳಿ

---

ಅ. ಸಾಮಾನ್ಯ ವಿವರ

1. ಸದಸ್ಯರ ಹೆಸರು :
2. ವಯಸ್ಸು :
3. ಜಾತಿ :
4. ವಿದ್ಯಾಭ್ಯಾಸ :

ಆ. ವಿತ್ತೀಯ ನಿರ್ವಹಣೆಯ ಕುರಿತು ಅಭಿಪ್ರಾಯ:

| ಸೂಚಕಗಳು | ಉತ್ಕೃಷ್ಟ (4) | ಅತ್ಯುತ್ತಮ (3) | ಉತ್ತಮ (2) | ಸಾಧಾರಣ (1) | ಏನೂ ಇಲ್ಲ (0) |
|---|---|---|---|---|---|
| ಕೇಂದ್ರ ಸರಕಾರದ ಅನುದಾನಗಳ ವಿನಿಯೋಗ | | | | | |
| ರಾಜ್ಯಸರಕಾರದ ಅನುದಾನಗಳ ವಿನಿಯೋಗ ತೆರಿಗೆ ಸಂಗ್ರಹ | | | | | |
| ಕಾರ್ಯಕ್ರಮ ಯೋಜನೆಯ ಕುರಿತು | | | | | |
| ಸ್ವತುಗಳ ನಿರ್ಮಾಣ | | | | | |
| ವೆಚ್ಚದ ಪರಿಣಾಮ | | | | | |
| ಆದಾಯ | | | | | |

ಇ. ಮಹಾನಗರ ಪಾಲಿಕೆಯ ವಿತ್ತೀಯ ನಿರ್ವಹಣೆಯನ್ನು ಇನ್ನೂ ಸುಧಾರಿಸಲು ನಿಮ್ಮ ಸಲಹೆಗಳೇನು?

